# ಸಿದ್ಧಗಂಗಾ

ಸಂಪುಟ–27.   ಸಂಚಿಕೆ–10.   ಅಕ್ಟೋಬರ್–1991.

ಭ್ರಷ್ಟಾಚಾರದ ಬಯಲು ನೃತ್ಯ ಎಲ್ಲೆಲ್ಲೂ ನಡೆದಿದೆ, ಎಲ್ಲ ಹಂತಗಳಲ್ಲೂ ವಿಜೃಂಭಿಸಿದೆ. ಜನ ನಾಯಕರು ನೈತಿಕ ದಿವಾಳಿಯ ದೀಪಾವಳಿಯನ್ನೇ ಆಚರಿಸುತ್ತಿದ್ದಾರೆ. ಅಧಿಕಾರಿಗಳು, ನೌಕರರು, ರಕ್ಷಕರು, ಶಿಕ್ಷಕರು ಅಪವಾದವಿಲ್ಲವೆಂಬಂತೆ ಭ್ರಷ್ಟಾಚಾರದ ಸ್ಪರ್ಧೆ ನಡೆಸಿದ್ದಾರೆ. ಸಾರ್ವಜೀವನ ಪೂರ್ಣ ರಾಡಿಯಾಗಿ ಹೋಗಿದೆ. ಯುವಜನಾಂಗ ಬೆಳಕು ಕಾಣದೆ ಹತಾಶರಾಗುತ್ತಿದ್ದಾರೆ; ಸಮಾಜ ಕಂಟಕರಾಗಿ ತಲೆ ಎತ್ತುತ್ತಿದ್ದಾರೆ. ಮಠಾಧಿಪತಿಗಳು ಧರ್ಮಾಧಿಕಾರಿಗಳು ಜಾಗೃತರಾಗಿ ಈ ಅನಿಷ್ಟ ಪರಿಹಾರಕ್ಕಾಗಿ ಸಂಕಲ್ಪ ದೀಕ್ಷಿತರಾಗಬೇಕಾಗಿದೆ.

– ಡಾ॥ ಶ್ರೀ ಶ್ರೀ ಶ್ರೀ ಶಿವಕುಮಾರಸ್ವಾಮಿಗಳು

ಪ್ರಕಾಶಕರು:
ಹಳೆಯ ವಿದ್ಯಾರ್ಥಿಗಳ ಸಂಘ.
ಸಿದ್ಧಗಂಗಾ ಕ್ಷೇತ್ರ.

'ಸಿದ್ಧಗಂಗಾ' ಚಿರಾಯುವಾಗಲೆಂದು ಹರಸಿ ಹಾರೈಸುವ
ಅಜೀವ ಸದಸ್ಯರ ಬಳಗ.

1343 ಶ್ರೀ ರಾಜಶೇಖರಪ್ಪ ಸಜ್ಜನ್, ರಂಗಂಪೇಟೆ,
ಸುರಪುರ, ಗುಲ್ಬರ್ಗ ಜಿಲ್ಲೆ

1344 ಶ್ರೀ ಶರಣಗೌಡ ಬೀರಾದಾರ್, ಮನಮತಗಿ,
ಶಹಪುರ ತಾ||, ಗುಲ್ಬರ್ಗಜಿಲ್ಲೆ

1345 ಶ್ರೀ ಆರ್. ಸಿ. ಜಾಲಕಿ, ನಾಗಯ್ಯ, ನಂದಿಕೋಲು,
ಸುರಪುರ ತಾ||, ಗುಲ್ಬರ್ಗ ಜಿಲ್ಲೆ

1346 ಶ್ರೀ ಎಂ. ಮುದ್ದರಂಗಯ್ಯ, ರಾಜಾಜಿನಗರ, ಬೆಂಗಳೂರು

1347 ಶ್ರೀ ಬಿ. ಟಿ. ಲಿಂಗದೇವರಯ್ಯ, ಪ್ರಾಂಶುಪಾಲರು,
ಜನತ ಜೂನಿಯರ್ ಕಾಲೇಜು, ಹಂದನಕೆರೆ, ತುಮಕೂರು ಜಿಲ್ಲೆ

1348 ಶ್ರೀ ರಂಗಸ್ವಾಮಿ, ಪ್ರೊ|| ಪ್ರತಿಭಾ ಏಜನ್ಸೀಸ್,
ತಿಪಟೂರು, ತುಮಕೂರು ಜಿಲ್ಲೆ

13.9 ಶ್ರೀ ಎ.ಆರ್. ಕೊಟಕಿ, ಗಜೇಂದ್ರಗಡ
ರೋಣಾ ತಾ||, ಧಾರವಾಡ ಜಿಲ್ಲೆ

1350 ಶ್ರೀ ಎಸ್. ಉಮೇಶ್, S/o ಸರಾಫ್‌ಶಿವಶಂಕರಪ್ಪ
ಚಾಮರಾಜಪೇಟೆ, ಬೆಂಗಳೂರು - 18

1351 ಶ್ರೀ ಹೆಚ್. ಎಸ್. ಜಯಣ್ಣ, S/o ಹೆಚ್. ವಿ. ಶಿವಣ್ಣ
ಚಾಮರಾಜ ಪೇಟೆ, ಬೆಂಗಳೂರು

1352 ಶ್ರೀ ಬಿ.ಎಸ್. ನಟರಾಜ್ S/o ಶ್ರೀ ಎಸ್. ಶಾಂತಯ್ಯ
ಚಾಮರಾಜ ಪೇಟೆ, ಬೆಂಗಳೂರು - 18

1353 ಶ್ರೀ ಬಿ ಸಿ. ಹೊನ್ನಪ್ಪ, ಬೈಯ್ಯಂಡಹಳ್ಳಿ, ಬೆಂಗಳೂರು-30

1354 ಶ್ರೀ ಬಿ. ಶಿವಣ್ಣ, ಗೋವಿಂದರಾಜ ನಗರ, ಬೆಂಗಳೂರು-40

1355 ಶ್ರೀ ಎಲ್ ಎಫ್, ಹುಂಡೇಕರ್, ಬೀಚೊಲೀಮ್, ಗೋವಾ.

1356 ಶ್ರೀ ಪಿ.ಎನ್. ಲಿಂಗಪ್ಪ, ವಿಜಯ ನಗರ, ಬೆಂಗಳೂರು.

1357 ಶ್ರೀ ಕೆ. ಆರ್. ಸಿದ್ಧಲಿಂಗಾಚಾರ್, S/o ಶ್ರೀ ಪಿ. ರಾಜಾಚಾರ್,
ಶಿಕ್ಷಕರು, ಕಬ್ಬೂರ್, ಹೊಳೇನರಸಿಪುರ ತಾ||, ಹಾಸನ ಜಿಲ್ಲೆ.

1358 ಶ್ರೀ ಎಲ್. ಶಿವಕುಮಾರ್, ಅಸಿಸ್ಟೆಂಟ್, ಕೆ.ಇ.ಬಿ,
ಯಲಹಂಕ, ಬೆಂಗಳೂರು - 64

# ಸಿದ್ಧಗಂಗಾ

ಸಂಪುಟ - 27. ಸಂಚಿಕೆ - 10. ಅಕ್ಟೋಬರ್ 1991.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ.

ಕರ್ತನಟ್ಟಿದನೆಂದು ಮರ್ತ್ಯಕ್ಕೆ ಬಂದಿರುವೆ
ಮರ್ತ್ಯದ ಮಣಿಹವ ನಡೆಸಿರುವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

  

ಕಾಲಕರ್ಮಗಳ ಜಾಲವನು ಬಿಡಿಸುವ
ಲೀಲೆ ನೀನಡೆಸಿರುವೆ ನನ್ನತಂದೆ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

  

ಕಾಶಿ ಶ್ರೀ ಶೈಲಗಳು ತೀರ್ಥಕೇದಾರಗಳು
ಶ್ರೀ ಚರಣಕಿಂ ಮಿಗಿಲೆ ನನ್ನತಂದೆ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

— ಹೆಚ್. ವಿ. ವೀರಭದ್ರಯ್ಯ.

| ಲೇಖನ | ಲೇಖಕರು | ಪುಟ |
|---|---|---|
| * ಶ್ರೀವಾಣಿ | | 5 |
| * ಶ್ರೀ ಸಿದ್ಧಲಿಂಗೇಶ್ವರ ವಚನ | | 8 |
| * ಸಂಪಾದಕೀಯ | | 9 |
| * ತುಮಕೂರು ಜಿಲ್ಲೆಯ ಇತಿಹಾಸ | ಕೃಪೆ:- ಇತಿಹಾಸ ಪರಿಷತ್ | 11 |
| * ಬಸವತತ್ತ್ವ ರತ್ನಾಕರ-6 | ಮೋಟಗಿ ಮಲ್ಲಿಕಾರ್ಜುನ | 19 |
| * ಅಪ್‌ಟುಡೇಟ್‌ಗಣೇಶ | ಎಲ್. ಆರ್. ಹೆಗಡೆ | 26 |
| * ಚಿಂತನ-ಮಂಥನ | ತದ್ದಲಸೆ ವಿಘ್ನೇಶ್ವರ ಶರ್ಮ | 33 |
| * ವಿಜ್ಞಾನ ಮತ್ತು ಅಧ್ಯಾತ್ಮ | ಎಚ್. ಎಸ್. ನರಸಿಂಹಜೀಯರ್ | 35 |
| * ವರತಪಸ್ವಿ | ಜಿ. ರಾಧಾದೇವಿ | 40 |
| * ಕ್ಷೇತ್ರ ವಾರ್ತೆ | ಹೆಚ್. ಬಿ. ಗಂಗಾಧರಯ್ಯ | 45 |
| * ಅಭಿನಂದನೆ | | 48 |
| * ಶ್ರದ್ಧಾಂಜಲಿ | | 49 |
| * ಸಂತಾಪ | | 50 |

# ಶ್ರೀ ವಾಣಿ



## ಕಾಪಿ ಪಿಡುಗು

ಎಸ್.ಎಸ್.ಎಲ್.ಸಿ ಫಲಿತಾಂಶ ಪ್ರಕಟವಾದ ಸಂದರ್ಭ. ಪತ್ರಿಕೆಗಳ ತುಂಬ ಶಿಕ್ಷಣ ಸಂಸ್ಥೆಗಳ ಹೆಮ್ಮೆಯ ಪ್ರಕಟಣೆ. ತಮ್ಮ ಸಂಸ್ಥೆಯ ಫಲಿತಾಂಶ ನೂರಕ್ಕೆ ನೂರು, ನೂರಕ್ಕೆ ತೊಂಬತ್ತೆಂಟು, ತೊಂಬತ್ತೈದು ಮುಂತಾಗಿ ಸಾರ್ವಜನಿಕರ ಗಮನ ಸೆಳೆದದ್ದೇ ಸೆಳೆದದ್ದು. ಸಂಸ್ಥೆಯ ಮುಖ್ಯಸ್ಥರು ಶಿಕ್ಷಕರು ಬೆನ್ನು ತಟ್ಟಿ ಕೊಂಡ ಪ್ರಸಂಗಗಳು, ಎಲ್ಲೆಲ್ಲೂ ವಿದ್ಯಾರ್ಥಿಗಳಿಗಂತೂ ತಾವು ಪ್ರೌಢ ವಿದ್ಯಾಭ್ಯಾಸ ಮುಗಿಸಿದೆವು ಎಂಬ ಹೆಮ್ಮೆ. ಶಿಕ್ಷಣಾಧಿಕಾರಿಗಳು ಫಲಿತಾಂಶದಲ್ಲಿ ಹೆಚ್ಚಳ ಎಂಬ ಪತ್ರಿಕಾ ಹೇಳಿಕೆ. ಶಿಕ್ಷಣ ಕ್ಷೇತ್ರ ಸುಧಾರಿಸುತ್ತಿದೆ ಎಂದು ಶಿಕ್ಷಣ ಸಚಿವರ ತೃಪ್ತಿ. ತಮ್ಮ ಮಕ್ಕಳು ಸದ್ಯ ಪಾಸಾದರು ಎಂಬುದಾಗಿ ಪೋಷಕರ ನೆಮ್ಮದಿಯ ನಿಟ್ಟುಸಿರು.

ಆದರೆ. ಫಲಿತಾಂಶ ಉತ್ತಮಗೊಳ್ಳಲು ಅನುಸರಿಸಿದ ಮಾರ್ಗಗಳು ಯಾವುವು ? ಸಕ್ರಮವಾಗಿದ್ದವೆ ? ನೈತಿಕತೆಯ ತಳಹದಿಯ ಮೇಲೆ ರೂಪಿತವಾಗಿದ್ದವೇ? ಯೋಚಿಸುವ ಪ್ರವೃತ್ತಿ ಸಂಬಂಧಿಸಿದವರಲ್ಲಿ ಕಾಣುತ್ತಿದೆಯೇ? ಏಕೆ ಹೀಗೆ ? ಎತ್ತ ಸಾಗಿದ್ದೇವೆ ? ವಿಚಾರ ಮಾಡಬೇಡವೆ ? ವರ್ಷದುದ್ದಕ್ಕೂ ಪಾಠ ಪ್ರವಚನ ಬೋಧಿಸುವ ಶಿಕ್ಷಕವರ್ಗ ತನ್ನ ವಿದ್ಯಾರ್ಥಿ ಅನೈತಿಕಮಾರ್ಗ ಅನುಸರಿಸಿದಂತಹ ಮಾರ್ಗ ತೋರಿಸಲು ಬರಲಾರದೆ ಅಥವಾ ಅಸಹಾಯಕನಾಗಿದ್ದಾನೆಯೆ ?

ಆದಕ್ಕೆ ಕಾರಣಗಳೇನು ? ವಿದ್ಯಾರ್ಥಿಯ ಸುತ್ತ-ಮುತ್ತ ಬೆಳೆಯುತ್ತಿರುವ ಭ್ರಷ್ಟಾಚಾರದ ರಾಜಮಾರ್ಗವೆ ? ತಮ್ಮ ಮಕ್ಕಳು ಅನೈತಿಕವಂತರಾಗಬಾರದು ಎಂಬ ಎಚ್ಚರದಿಂದ ಪೋಷಕ ಪಾಲಕರು ಕರ್ತವ್ಯಚ್ಯುತರಾಗುತ್ತಿದ್ದಾರೆಯೆ ? ಪಾಸು-ಫೇಲುಗಳ ಅಂಕಿ ಅಂಶಗಳು ಮುಖ್ಯವಲ್ಲ ಉತ್ತಮ ನಡತೆಯ ಯುವಜನಾಂಗ ನಾಡಿನ ಆಸ್ತಿ ಎಂಬುದನ್ನ ಸರ್ಕಾರ ಸಮಾಜ ಗಮನಿಸುತ್ತಿಲ್ಲ ಏಕೆ ? ಫಲಿತಾಂಶದ ಹೆಚ್ಚಳಕ್ಕಾಗಿ ಅನುಸರಿಸುತ್ತಿರುವ ಅನೈತಿಕ ಮಾರ್ಗಗಳು ಎಷ್ಟು ? ಯಾವರೂಪದವು ? ಯಾವ ಯಾವ ಹಂತದಲ್ಲಿ ಯಾರ್ಯಾರು ಎಷ್ಟೆಷ್ಟು ಭಾಗಿಗಳು ಎಂಬುದಕ್ಕಾಗಿ ನೇಮಕವಾಗುತ್ತಿರುವ ವಿಚಾರಣಾ ಸಮಿತಿಗಳು, ಜಾಗೃತ ದಳಗಳು, ಮುಕ್ತವಾಗಿ ಪ್ರಾಮಾಣಿಕವಾಗಿ ತಮ್ಮ ಪಾಲಿನ ಕರ್ತವ್ಯ ನಿರ್ವಹಿಸಲು ಎದುರಾಗುತ್ತಿರುವ 'ಸೂಕ್ಷ್ಮ ಸಮಸ್ಯೆ'ಗಳಿಗೆ ಪರಿಹಾರ ಎಲ್ಲಿ ಕಂಡುಕೊಂಡು ಕೊಳ್ಳುವುದು? ಪರೀಕ್ಷಾನಂತರ ನಡೆಯುತ್ತಿರುವ ಅಕ್ರಮಗಳು ಹೇಗೆ ? ಎಲ್ಲಿ ತಲೆ ಎತ್ತುತ್ತವೆ ? ಉತ್ತರಪತ್ರಿಕೆಗಳ ಮೌಲ್ಯ ಮಾಪನಕ್ಕೆ ಮೊದಲ ಗುಪ್ತಸಂಖ್ಯೆಗಳನ್ನು ಕೊಟ್ಟೊ ಅಕ್ರಮಗಳು ನಡೆಯಲು ಯಾರು ಕಾರಣ ? ಅಂಕ ಪಟ್ಟಿಯ ದೋಷಗಳು ಹೇಗೆ ನುಸುಳುತ್ತವೇ ? ಆಕಸ್ಮಿಕವಾಗಿಯೇ ? ಅಥವಾ ? ಅದೊಂದು ವ್ಯವಸ್ಥಿತ ರಹಸ್ಯ ತಂತ್ರವೇ ? ಆಕಾಶದಲ್ಲಿ ಮಿನುಗುವ ನಕ್ಷತ್ರಗಳನ್ನು ಎಣಿಸಬಹುದೆಂದು ಕಾಣುತ್ತದೆ ಈ ವಿಜ್ಞಾನ ಯುಗದಲ್ಲಿ. ಆದರೆ ಮನುಷ್ಯನ ಅನೈತಿಕ ಅಪ್ರಮಾಣಿಕ ಕೃತ್ಯಗಳನ್ನು ಎಣಿಸಲಾಗದೆಂದೇ ಹೇಳುವಂತಾಗಿದೆ. ಪರೀಕ್ಷೆ ಎಂಬುದು ಪಕ್ವತೆಯ ಅಳತೆಗೋಲಾಗಬೇಕೇ ಹೊರತು ಶೇಖಡವಾರು ಹೆಚ್ಚಳದ ಸಂತೆಯಾಗಬಾರದು. ಪರೀಕ್ಷಾ ವ್ಯವಸ್ಥೆಯ ಪಾವಿತ್ರ್ಯಕ್ಕೆ ಸಂಬಂಧಿಸಿದವರೆಲ್ಲರೂ ಆತ್ಮಶೋಧ ಮಾಡಿಕೊಳ್ಳಬೇಕು. ಫಲಿತಾಂಶದ ಹೆಚ್ಚಳಕ್ಕೆ ಅನುಸರಿಸುತ್ತಿರುವ ಮಾರ್ಗ ಭವಿಷ್ಯದ ಜನಾಂಗವನ್ನು ವಿಷಕೂಪದತ್ತ ತಳ್ಳುತ್ತಿದ್ದೇವೆ ಎಂದು ? ಆತ್ಮಪರೀಕ್ಷೆಗಿಂತ ಲೋಕ ನಿರೀಕ್ಷೆ ದೊಡ್ಡದಲ್ಲ " ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ, ನಿಮ್ಮನಿಮ್ಮಮನವ ಸಂತೈಸಿಕೊಳ್ಳಿ " ಎಂಬ ಬಸವಣ್ಣನವರ ಮಾತಿನಲ್ಲಿ ಸ್ಮರಿಸಿಕೊಳ್ಳಬಹುದು. ಆತ್ಮವಂಚನೆಗಿಂತಮಿಗಿಲಾದ ಪಾಪಮತ್ತೊಂದಿಲ್ಲ. ಅಂತೆಯೇ ಆತ್ಮಪರೀಕ್ಷೆಗಿಂತ ಶ್ರೇಷ್ಠವಾದ ಪೂಜೆ ಇನ್ನೊಂದಿಲ್ಲ. ಸುಸಂಸ್ಕೃತ ಜನಾಂಗನಿರ್ಮಾಣ ಕಾರ್ಯದಲ್ಲಿ ಆತ್ಮಪರೀಕ್ಷೆಯ ಅವಶ್ಯಕತೆ ತುಂಬಾ ಶ್ರೀಪ್ರವಾದುದು.

## ಶ್ರೀ ಸಿದ್ಧಲಿಂಗೇಶ್ವರ ವಚನ



ಎಮ್ಮೆಯನೇರಿದ ಎತ್ತು ಸಮ್ಮಗಾರ ನೋಡಾ
ಎತ್ತಿನ ಒಡೆಯ ಬಂದು ಎಮ್ಮೆಯ ಕೊಲಲು
ಸಮ್ಮಗಾರ ಸತ್ತು ನಿಮ್ಮ ಕಂಡೆನು ಕಾಣಾ
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ.

ಅವಿದ್ಯೆಯಿಂದ ಕೂಡಿ ವರ್ತಿಸುವ ಸಜ್ಜೀವನು ಕೇವಲ ಜೀವಾತ್ಮನಾಗಿ ವರ್ತಿಸುತ್ತಿರಲು ಆ ಜೀವನಿಗೆ ಕರ್ತೃವಾದ ಸಜ್ಜೀವ ಸ್ವರೂಪನಾದ ಶ್ರೀಗುರುಮಂತ್ರ ಲಿಂಗ ಸಂಬಂಧದಿಂದ ಅವಿದ್ಯಾಭಾವವ ನಷ್ಟಮಾಡಲು ಸುಜ್ಞಾನೋದಯವಾಗಿ, ಜೀವತ್ವವಳಿದು, ಲಿಂಗದಲ್ಲಿಯ ಏಕತ್ವಕ್ಕೆ ಯೋಗ್ಯವಾದೆನೆಂಬುದನ್ನು ಜ್ಞಾನನೇತ್ರದಿಂದ ಕಂಡಕೊಂಡೆನು.

ಎಮ್ಮೆ-ಅವಿದ್ಯೆ. ಎತ್ತು-ಜೀವ, ಎತ್ತಿನ ಒಡೆಯ ಶ್ರೀಗುರು.

ಸಿದ್ಧಗಂಗಾ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಮಠ-572104
ತುಮಕೂರು ಜಿಲ್ಲೆ

ಪ್ರಧಾನ ಸಂಪಾದಕರು
ಡಾ|| ಚನ್ನಪ್ಪ ಎರೇಸೀಮೆ

* * *

ಸಂಪಾದಕರು
ಹೆಚ್. ವಿ. ವೀರಭದ್ರಯ್ಯ

* * *

ಸಹ ಸಂಪಾದಕರು
ಬಿ. ವೀರಭದ್ರಯ್ಯ
ಪಿ. ಎಸ್. ಚಂದ್ರಶೇಖರಯ್ಯ

* * *

ಜಾಹೀರಾತು ವಿಭಾಗ
ಎಂ. ರೇಣುಕಾರಾಧ್ಯ

* * *

ವಿತರಣೆ ವಿಭಾಗ
ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾಕ್ಷೇತ್ರ

ಚಂದಾ ವಿವರ
ವಾರ್ಷಿಕ ಚಂದಾ 25-00ರೂ
ಆಜೀವ ಸದಸ್ಯತ್ವ 250-00 ರೂ

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ. ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಶ್ರೀ ಶ್ರೀ ಡಾ|| ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ. ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ. ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

" ಸಂಪಾದಕರು "
'ಸಿದ್ಧಗಂಗಾ' ಕನ್ನಡ ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.
ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ

# ಸಂಪಾದಕೀಯ

ಬೆಂಗಳೂರು ಗವಿಪುರಬಡಾವಣೆ ಎರಡನೆ ರಸ್ತೆ ಶ್ರೀ ನಿಜಗುಣರ ಜಂಗಮ ಮಠ, ಅಲ್ಲೊಂದು ಧಾರ್ಮಿಕ ಸಪ್ತಾಹ ಕಾರ್ಯಕ್ರಮ. ಒಂದು ವಾರ ನಡೆದ "ಅನುಭಾವಸಪ್ತಾಹ" ದಿನಾಂಕ 15-9-91 ರಿಂದ 21-9-91ರ ವರೆಗೆ ನಡೆಯಿತು. "ವೀರಶೈವ ಧರ್ಮಗ್ರಂಥನಿರ್ಣಯ ವಿಚಾರ ಕಮ್ಮಟ" ವೆಂದು ಹಮ್ಮಿಕೊಂಡ ಕಾರ್ಯಕ್ರಮದಲ್ಲಿ ಧರ್ಮಗುರುಗಳು, ಅನುಭಾವಿಗಳು ವಿದ್ವಾಂಸರು, ಆಸಕ್ತರು ಪಾಲ್ಗೊಂಡು ವಿವಿಧ ವಿಷಯಗಳನ್ನು ಕುರಿತು ಪ್ರಬುದ್ಧ ಉಪನ್ಯಾಸಗಳು ಅರಳಿದವು. "ಗುರು-ಲಿಂಗ-ಜಂಗಮದ ಪರಿಕಲ್ಪನೆ, ಅಷ್ಟಾವರಣದ ಅಂತರಂಗ, ಪಂಚಾಚಾರದ ಪರಿಪೂರ್ಣತೆ ಷಟ್‌ಸ್ಥಲದ ಸೋಪಾನ, ವೀರಶೈವಧರ್ಮ ಸಂಸ್ಕಾರಗಳು, ವೀರಶೈವ ವಿವಾಹ ಪದ್ಧತಿ, ಸಮಾಜ ಮತ್ತು ಧರ್ಮ"-ಗಳನ್ನು ಅನುಭಾವಸಪ್ತಾಹದಲ್ಲಿ ಅಳವಡಿಸಿದ್ದು ಶ್ಲಾಘನೀಯವಾದುದು. ವಿಚಾರ ಚರ್ಚೆಯಲ್ಲಿ ವಿದ್ವಾಂಸರು ಅನುಭಾವಿಗಳು, ಸ್ವಾಮಿಗಳು ಭಾಗವಹಿಸಿದ್ದರು. ಆದರೆ ಜಗತ್ತಿನ ಅತ್ಯಂತ ವಿಚಾರಾತ್ಮಕವಾದ, ಕ್ರಿಯಾವಂತ ವೀರಶೈವ ಧರ್ಮಗ್ರಂಥ ನಿರ್ಣಯ" ದಲ್ಲಿ ಇನ್ನೂ ವ್ಯಾಪಕವಾದ, ತಲಸ್ಪರ್ಶಿಯಾದ, ಆಳವಾದ ಅರಿವು ಆಚಾರಗಳುಳ್ಳ ಪ್ರಾಜ್ಞರು ಭಾಗವಹಿಸಬೇಕಾಗಿತ್ತು ಎನಿಸಿತು. ಕಾರ್ಯಕ್ರಮ ಸಂಯೋಜಕರ ಕಳವಳ, ಸಮಾಜಾಭಿಮಾನ, ಆತಿಥ್ಯನೀಡಿದ ಶ್ರೀ ನಿಜಗುಣರ ಜಂಗಮ ಮಠದ ಪೂಜ್ಯ ಶ್ರೀ ಶ್ರೀಗಳವರ ಸೇವಾ ಮನೋಧರ್ಮವನ್ನು ಸಮಾಜ ಬಾಂಧವರು ಗಮನಿಸದೇ ಹೋದುದು 'ಲಿಂಗವಂತ' ಧರ್ಮಾಭಿಮಾನಿಗಳು ಯೋಚಿಸುವಂತಾಯಿತು. ವಿಚಾರ ಕಮ್ಮಟದಲ್ಲಿ ಮೂಡಿಬಂದ ವಿಚಾರಗಳೆಲ್ಲ ಗನಗಹನವಾದುವೇ, ಭಾಗವಹಿಸಿದ್ದ ವಿದ್ವಾಂಸರೂ ನಾಡಿನ ಪ್ರಸಿದ್ಧನಾಮರೇ ಕೈಗೊಂಡ ನಿರ್ಣಯಗಳು ಸೂಕ್ತವಾದುವೇ. ಸುಮಾರು ಎರಡು ಕೋಟಿ ಲಿಂಗವಂತ ಸಮಾಜ ಬಂಧುಗಳು ಅನುಸರಿಸ ಬೇಕಾದ, "ಧರ್ಮಗ್ರಂಥ" ರೂಪಿತವಾಗಬೇಕಾದರೆ ಇನ್ನೂ ವ್ಯಾಪಕವಾದ ಚಿಂತನ ಮಂಥನ, ಅಭಿಪ್ರಾಯ ಸಂಗ್ರಹಣ ಹಾಲಿ ಆಚರಣೆಯಲ್ಲಿರುವ ನ್ಯೂನತೆಗಳು, ಅವುಗಳು ನುಸುಳಿಬಂದ ಹಿನ್ನೆಲೆ, ಪ್ರಭಾವ ಪರಿಣಾಮಗಳು, ಅನ್ಯ ಸಂಸ್ಕೃತಿಯ ಕೊಡುಗೆ, ಇತಿಹಾಸಜ್ಞಾನ, ಪರಂಪರೆಯ ಪರಿಕ್ರಮ, ತತ್ವದರ್ಶನಕ್ಕೆ ಬೇಕಾದ

ಸಹಾಯಕ ಸಾಮಗ್ರಿ, ಸಾಹಿತ್ಯ, ಸಮಾಜದಲ್ಲಿ ಇಂದು ಬೆಳೆದು ಬಂದಿರುವ ಆಚರಣೆಗಳು, ಬೇರು ಬಿಟ್ಟಿರುವ ನಂಬಿಕೆಗಳು ಅವುಗಳ ಸತ್ಯಾಸತ್ಯಗಳ ಕೂಲಂಕಷ ವಿಮರ್ಶೆ ಇತ್ಯಾದಿಗಳೆಲ್ಲವುಗಳ ಸಮಗ್ರ ವ್ಯಾಪಕ ವಿಚಾರಕಮ್ಮಟಗಳು ನಾಡಿನೆಲ್ಲಕಡೆ ಮೊದಲು ನಡೆಯಬೇಕು. ಅಭಿಪ್ರಾಯಗಳು ಸಂಗ್ರಹವಾಗ ಬೇಕು, ಅನುಭಾವಿಗಳ ಬೆಳಕಿನಲ್ಲಿ ವಿದ್ವಾಂಸರು ಒಮ್ಮತದ ನಿರ್ಣಯಕ್ಕೆ ಬರಬೇಕು ಪ್ರಜಾಪ್ರಭುತ್ವ ತತ್ವವನ್ನು ಒಪ್ಪಿಕೊಂಡಿರುವ ಲಿಂಗವಂತ ಧರ್ಮ ಚಿರಂತನವಾಗಿ ನಳನಳಿಸುವಂತೆ ಆಚರಣೆಗೆ ಸುಲಭವಾಗುವಂತೆ ಧರ್ಮಗ್ರಂಥದ ನಿರ್ಣಯವಾಗುವುದು ಸ್ವಾಗತಾರ್ಹವು. ಅನುಭಾವ ಸಪ್ತಾಹ ಕಾರ್ಯಕ್ರಮದ ನಿಯೋಜಕರು ಆ ಉದ್ದೇಶದಿಂದಲೇ "ಧರ್ಮದರ್ಶಿನಿ" ಗ್ರಂಥವನ್ನೂ ಹೊರತರುವ ಸತ್ಪ್ರಯತ್ನ ಶೀಲರಾಗಿದ್ದಾರೆ. ಅವರಿಗೆ ಅಭಿವಂದನೆ ಇಂತಹ ವಿಷಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಎಲ್ಲ ಪೂಜ್ಯರು ಅನುಭಾವಿಗಳು, ವಿದ್ವಾಂಸರು ವಂದನಾರ್ಹರು. ಶತಮಾನಗಳಿಂದ ಬೆಳೆದು ಬಂದಿರುವ ಧರ್ಮವೊಂದು ಆಚರಿಸಬಹುದಾದ ಆಚರಣೆಗಳನ್ನು ಕುರಿತ ಧರ್ಮಗ್ರಂಥವೊಂದರ ನಿರ್ಣಯವಾಗುವ ಎಷ್ಟೊಂದು ದೂರದೃಷ್ಟಿ ಅಗತ್ಯವೆಂಬುದನ್ನು ಆಲೋಚಿಸ ಬೇಕಾದುದು ವಿಚಾರಶೀಲರೆಲ್ಲರಿಗೆ ಹೊಳೆಯದಿರದು. ಸಮಾಜದ ಮುಂದೆ ಇಂಥ ಮಹತ್ವದ ಮಣಿಹ ಇಂದುಬಂದಿದೆ. ನಮ್ಮ ಕರ್ತವ್ಯ, ಕಾಣಿಕೆಯೇನು ಎಂಬುದನ್ನೀಗ ಎಲ್ಲರೂ ಚಿಂತಿಸಬೇಕು, ಕರ್ತವ್ಯ ಮುಖಿಗಳಾಗ ಬೇಕು. ಹಾಗಾಗಲಿ ಎಂದು 'ಸಿದ್ಧಗಂಗಾ' ಹಾರೈಸುತ್ತದೆ.

'ಅನುಭಾವಸಪ್ತಾಹ, ಸಂಪೂರ್ಣ ಆತಿಥ್ಯವನ್ನು ಆದರಾಭಿಮಾನಗಳಿಂದ ನಡೆಸಿಕೊಟ್ಟ ಶ್ರೀನಿಜಗುಣರ ಜಂಮಗಮಠದ ಪೂಜ್ಯ ಶ್ರೀಗಳವರಿಗೆ ಕಾರ್ಯಕ್ರಮವನ್ನು ರೂಪಿಸಿ ನಿರ್ವಹಿಸಿದ ಶರಣ ಬಂಧುಗಳಿಗೆ ಶರಣಾರ್ಥಿಗಳನ್ನು ಅರ್ಪಿಸಲು ಸಂತೋಷವಾಗುತ್ತದೆ.





## ತುಮಕೂರು ಜಿಲ್ಲೆಯ ಇತಿಹಾಸ

ಕೃಪೆ :- ಇತಿಹಾಸ ಪರಿಷತ್, ಗಾಂಧೀನಗರ, ತುಮಕೂರು.

ಜನರಲ್ಲಿ ಸ್ವಾಭಿಮಾನ, ದೇಶಾಭಿಮಾನ ಬೆಳೆಯ ಬೇಕಾದರೆ ತಮ್ಮ ಸುತ್ತ-ಮುತ್ತಣ ಸನ್ನಿವೇಶದ ಪರಿಚಯವಾಗಬೇಕು. ಈ ಇತಿಹಾಸವನ್ನು ಜನರ ಅವಗಾಹನೆಗಾಗಿ ಬರೆಯಲಾಗಿದೆ. ಇದಕ್ಕೆ ಸಂಬಂಧಪಟ್ಟ ಸಂಗತಿಗಳನ್ನು ಎರಡು ಭಾಗ ಮಾಡಬಹುದು.

1) ಪುರಾಣೋಕ್ತವಾದ ಕಥೆಗಳು

2) ಕನ್ನಡ ಸಾಹಿತ್ಯದಲ್ಲಿ, ಚರಿತ್ರೆಯಲ್ಲಿ ಶಾಸನಗಳಲ್ಲಿ ನಿಷ್ಕರ್ಷೆಯಾದ ವಿಷಯಗಳನ್ನೊಳಗೊಂಡ ಸಂಗತಿಗಳು.

### 1) ಪುರಾಣೋಕ್ತ ಕಥೆಗಳು

ದ್ವಾಪರ ಯುಗದಲ್ಲಿ ಭರತ ಖಂಡದಲ್ಲಿ ಪ್ರದ್ಯುಮ್ನನೆಂಬ ರಾಜನಿದ್ದನು. ಅವನು ತನ್ನ ಅವಸಾನಕಾಲದಲ್ಲಿ ತನ್ನ ಮೂವರು ಮಕ್ಕಳಿಗೂ ರಾಜ್ಯವನ್ನು ಹಂಚಿಕೊಟ್ಟನು ಅವರಲ್ಲಿ 1) ನೀಲಧ್ವಜನಿಗೆ ಮಾಹಿಷ್ಮತಿಯೂ 2) ಹಂಸಧ್ವಜನಿಗೆ ಚಂದ್ರಪುರವೂ 3) ಮೂರನೆಯವನಿಗೆ ರತ್ನಪುರವೂ ಬಂದವು.

ಹಂಸಧ್ವಜನ ಪಾಲಿಗೆ ಬಂದ ಚಂದ್ರಪುರದಲ್ಲಿ ತುಮಕೂರು ಪ್ರದೇಶವು ಸೇರಿತ್ತು ಹಂಸಧ್ವಜನ ಮಗನಾದ ಸುಧನ್ವನು ತುಮಕೂರಿಗೆ 20 ಮೈಲಿ ಪಶ್ಚಿಮಕ್ಕೆ ಚಂಪಕಾಪುರ ( ಸಂಪಿಗೆ ) ವನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು. ಇವನು ಪಾಂಡವರ ಅಶ್ವಮೇಧ ಕುದುರೆಯನ್ನು ತಡೆದು ಅರ್ಜುನನೊಡನೆ ಯುದ್ಧಮಾಡಿದುದನ್ನು ಕನ್ನಡ ಜೈಮಿನಿ ಭಾರತದಲ್ಲಿ ವಿಸ್ತಾರವಾಗಿ ಹೇಳಿದೆ.

### 2) ಚಾರಿತ್ರಿಕ ಸಂಗತಿ

ಸಾವಿರಾರು ವರ್ಷಗಳ ಹಿಂದೆ ಕರ್ನಾಟಕ ದೇಶದ ಹೇಮಚಂದ್ರನ ಮಗ ಸುಮತಿಯು ತಂದೆಯ ಅಪ್ಪಣೆಯ ಪ್ರಕಾರ ರಾಜಧಾನಿಯಾದ ಯದುಪಟ್ಟಣದಿಂದ ಹೊರಟು 13 ದಿನ ಪ್ರಯಾಣ ಮಾಡಿ, ನಾವು ಈಗ ದೇವರಾಯನದುರ್ಗ ಎಂದು ಕರೆಯುವ ಪರ್ವತ ಪ್ರದೇಶಕ್ಕೆ ಬಂದು ಅಲ್ಲಿದ್ದ ಕಳ್ಳರ ಮುಖಂಡನಾದ ಅಂಧಕನೆಂಬವನೊಡನೆ ಹೋರಾಡಿ ಅವನನ್ನೂ ಅವನ ಬಂಧು ಬಾಂಧವರನ್ನೂ ಕೊಂದು ಆ ಪರ್ವತ ಪ್ರದೇಶವನ್ನು ತನ್ನ ಸ್ವಾಧೀನ ಮಾಡಿಕೊಂಡು ಭೂಮಂಡನಪುರವೆಂಬ ರಾಜಧಾನಿಯನ್ನು ಕಟ್ಟಿಸಿ ಆಳಿದನು ಇದು ನೆಲಮಂಗಲ ತಾಲ್ಲೂಕಿನ ಮಣ್ಣೆ (ಮಾನ್ಯಪುರ) ಇರಬಹುದು ಎಂದು ಚರಿತ್ರೆ-ಕಾರರು ಹೇಳುತ್ತಾರೆ.

ವಿಜಯನಗರದಿಂದ ಹರಿಹರರಾಯನ ( 1376-1404 ) ಕಾಲದ 1403ನೇ ವರ್ಷದ ಶಾಸನದಲ್ಲಿ ಈಗಿನ ಶೀಬಿ ಅಗ್ರಹಾರದ ಪ್ರಾಂತವೆಲ್ಲಾ ಅರಣ್ಯವಾಗಿತ್ತೆಂದೂ ಹೇಳಿದೆ. ಈ ಪ್ರದೇಶದಲ್ಲಿ ಆನೆಗಳು ವಾಸಮಾಡಿಕೊಂಡಿದ್ದವು ಎಂಬುದಕ್ಕೆ ಕರಿಗಿರಿ ಮಹಾತ್ಮೆ ಎಂಬ ಗ್ರಂಥದಲ್ಲಿ ಆಧಾರವಿದೆ. ದೇವರಾಯನದುರ್ಗದ ಪ್ರದೇಶವು ಈಗಲೂ ಅರಣ್ಯವಾಗಿದೆ. ಈ ವಿಚಾರವನ್ನು ಹೈದರಲೀಖಾನ್‌ನು 1777 ನೇ ವರ್ಷದಲ್ಲಿ ಚಿಕ್ಕ ದೇವಾಲಯಕ್ಕೆ ಬರೆಸಿಕೊಟ್ಟಿರುವ ಭೂಮಿದಾನದ ಶಾಸನದಲ್ಲಿ ವಿವರವಾಗಿ ಹೇಳಿದೆ. ಇದರ ಪ್ರಕಾರ, ಈ ತಾಲ್ಲೂಕಿನ ವಾಯುವ್ಯ ಪ್ರದೇಶ 150 ವರ್ಷಗಳ ಹಿಂದೆ ಅರಣ್ಯವಾಗಿ ಬೆಳೆದುಕೊಂಡಿತ್ತೆಂದೂ ಈಗ ತುಮಕೂರಿನಲ್ಲಿರುವ ಕರಣೀಕನಲ್ಲಪ್ಪನವರ ಪೂರ್ವಜರು ಕಾಡು ಕಡಿದು ಆಕಾರ ಮಾಡಿದರೆಂದು, ಅದಕ್ಕಾಗಿ ಚಿಕ್ಕ ಶೀಬಿ ನರಸಿಂಹಸ್ವಾಮಿ ದೇವಾಲಯಕ್ಕೆ ಈ ಪ್ರಾಂತ್ಯವನ್ನು ದತ್ತಿಯಾಗಿ ಬಿಟ್ಟುಕೊಟ್ಟು, ಅವರನ್ನೇ ದೇವಾಲಯದ ಆಡಳಿತ ನೋಡಿಕೊಳ್ಳಲು ನೇಮಿಸಿದನೆಂದು ತಿಳಿಯುತ್ತದೆ. ಈ ಶಾಸನದಲ್ಲಿ ಹೈದರಲ್ಲಿಖಾನನ ಕೈಕೆಳಗೆ ಕಾರ್ಯದಲ್ಲಿ ಸುಭೇದಾರನಾಗಿದ್ದ ಬಾಜೀ ಅಬ್ದುಲ್ ಮತ್ತು ಬಜಿ ಅಬ್ದು ರಹೀಮ್ ಅವರ ಸಹಿ ಇದೆ.

ಅಲ್ಲದೇ ಈ ತಾಲ್ಲೂಕಿನ ಪೂರ್ವದಲ್ಲಿ ಕಾಡುಜನರಿದ್ದರೆಂದೂ ಇಲ್ಲಿ ಅವರು ಆಶ್ರಮಗಳನ್ನು ಕಟ್ಟಿಕೊಂಡಿದ್ದ ಅಗಸ್ತ್ಯ, ಗೌತಮ, ಪರಾಶರ ಋಷಿಗಳಿಗೆ ಅಡ್ಡಿಮಾಡುತ್ತಿದ್ದರೆಂದೂ, ಈ ತಪೋಧನರು ಅವರನ್ನು ನಿಗ್ರಹಿಸಲು ಪ್ರಯತ್ನ ಪಡುತಿದ್ದರೆಂದೂ ತಿಳಿಯುತ್ತದೆ. ಅಗಸ್ತ್ಯರು ಈ ತಾಲ್ಲೂಕಿಗೆ ಪೂರ್ವಕ್ಕೆ ಸ್ವಲ್ಪ ದೂರದಲ್ಲಿರುವ ಕ್ಯಮ್ಮಸಂದ್ರ ಎಂಬಲ್ಲಿಯೂ ಗೌತಮರು ಈ ತಾಲ್ಲೂಕಿನ ಕೌತುಮಾರನಹಳ್ಳಿ ಎಂಬಲ್ಲಿಯೂ, ಪರಾಶರರು ಕರಿಗಿರಿ ಎಂಬಲ್ಲಿಯೂ ಬೇರೆ ಬೇರೆ ಕಾಲದಲ್ಲಿದ್ದರೆಂದೂ ತಿಳಿದುಬಂದಿದೆ.

ತುಮಕೂರು ಪ್ರದೇಶದ ನಿಜವಾದ ಚರಿತ್ರೆಯನ್ನು ಈ ತಾಲ್ಲೂಕಿನಲ್ಲಿ ದೊರೆತಿರುವ ಶಾಸನಗಳಿಂದ ತಿಳಿಯಬಹುದು. ಶಾಸನಗಳಿಗೆ "ಚಪ್ಪೋಡುಗಳೆಂದೂ" ಹೆಸರಿದೆ. ಶಾಸನ ಎಂದರೆ ಅಪ್ಪಣೆ ಎಂದು ಅರ್ಥ. ಈ ಶಾಸನಗಳಲ್ಲಿ ಆಯಾ ಕಾಲದಲ್ಲಿ ಆಳುತ್ತಿದ್ದ ರಾಜರ ಹೆಸರುಗಳು, ಬಿರುದುಗಳು, ಮತ, ದಿಗ್ವಿಜಯಗಳೂ, ದಾನಧರ್ಮಗಳೂ ವಿವರಿಸಲ್ಪಟ್ಟಿವೆ. ಇವರು ಕಟ್ಟಿಸಿದ ದೇವಾಲಯಗಳೂ, ಛತ್ರಗಳೂ, ಕೆರೆಗಳೂ, ಅಗ್ರಹಾರಗಳೂ ತಿಳಿಸಲ್ಪಟ್ಟಿವೆ. ಅಲ್ಲದೆ ಗೌಡಿಕೆಗಳೂ, ಶಾನುಭೋಗಿಕೆಗಳೂ, ಸರ್ವಮಾನ್ಯಗಳೂ, ಕೊಡುಗೆಗಳೂ, ಉಂಬಳಿಗಳೂ ಸೇರಿವೆ. ಉಂಬಳಿ ಎಂದರೆ 1) ಆಧಾರ 2) ದಾನ 3) ಕ್ರಯ 4) ಪರಿವರ್ತನೆಗಳೆಂಬ 4 ವ್ಯವಹಾರಗಳಿಗೆ ಬಾಧ್ಯತೆಯಿಲ್ಲದೇ, ಬಂದ ಫಲವನ್ನು ಅನುಭವಿಸುವ ಹಕ್ಕುಳ್ಳ ಭೂಮಿಗಳು ಎಂದು ಅರ್ಥ



ಈ ಶಾಸನಗಳಲ್ಲದೆ ಕೆಲವು ವೀರಗಲ್ಲುಗಳೂ ಮತ್ತು ಮಹಾಸತಿಕಲ್ಲುಗಳೂ ಈ ಪ್ರಾಂತದಲ್ಲಿ ಇವೆ.

ಶಾಸನಗಳು ಸಾಮಾನ್ಯವಾಗಿ ಚಪ್ಪಡಿ ಕಲ್ಲುಗಳ ಮೇಲೆ ತಾಮ್ರದ ತಗಡುಗಳ ಮೇಲೆ ಬರೆಯಲ್ಪಟ್ಟಿವೆ. ಈ ತಾಲ್ಲೂಕಿಗೆ ಸಂಬಂಧಿಸಿದ 74 (1942ರವರೆಗೆ)111 (1954ರ ವರೆಗೆ) ದೊರೆತಿವೆ. ಇವುಗಳಲ್ಲಿ 16 ರಲ್ಲಿ ಅಕ್ಷರಗಳು ಅಳಸಿಹೋಗಿವೆ. ಇತರ 58ಶಾಸನಗಳು.

| | | | |
|---|---|---|---|
| 3. | ಗಂಗರಕಾಲದ ಶಾಸನಗಳು | | (700 ರಿಂದ 925 ಎ.ಡಿ.) |
| 1. | ಚಾಲುಕ್ಯರ | ,, | (1121ಎ.ಡಿ.) |
| 1. | ಕಾಕತೀಯರು | ,, | (1293) |
| 17. | ಹೊಯ್ಸಳರ | ,, | (1150—1328) |
| 23. | ವಿಜಯನಗರದ | ,, | (1387—1546) |
| 10. | ಮೈ. ಒಡೆಯರ | ,, | (1699—1858) |
| 1. | ಹಾಗಲವಾಡಿ ಪಾಳೇಗಾರರ | | (1760) |
| 1. | ಹೈದರಾಲಿ | | (1777) |
| 1. | ಟಿಪ್ಪುಸುಲ್ತಾನ್ | | (1782) |

ಈ ಶಾಸನಗಳು ದೊರೆತಿರುವ ಸ್ಥಳಗಳು :- ತುಮಕೂರು, ಹೆಗ್ಗೆರೆ, ಕೈದಾಳ, ಉಳ್ಳೇನಹಳ್ಳಿ, ಮುಳುಕುಂಟೆ, ಪಿರುಪಸಂದ್ರ, ಹೊನ್ನುಡಿಕೆ, ಹೆಬ್ಬೂರು, ರಾಯಪುರ ಹರಳೂರು, ಪಾಲಸಂದ್ರ, ಕೊಡುಗೇಹಳ್ಳಿ, ದೇವರಾಯನದುರ್ಗ, ಕೋಳಾಲ, ಮೈದಾಳ, ಪಂಡಿತನಹಳ್ಳಿ, ಬ್ಯಾಟರಾಯನಪಾಳ್ಯ, ಸೀತಕಲ್ಲು, ದಮುಟೆಹಳ್ಳಿ, ಚಿನ್ನಹಳ್ಳಿ ಎಲಚಿಕೆರೆ, ಭೀಮಸಾಗರ, ಕೋರಾ, ಬ್ರಹ್ಮಸಂದ್ರ, ತರೀಕೆರೆ, ನೆಲಹಾಲು, ಮಾವುಕೆರೆ, ಚಿಕ್ಕನಾರವಂಗಲ, ದೊಡ್ಡನಾರವಂಗಲ, ಕೊಟ್ನಹಳ್ಳಿ ಚಿಕ್ಕಶೀಬಿ.

ಸುಮಾರು 952 ರಿಂದ 1004 ರ ವರೆಗೆ, 52 ವರ್ಷಗಳ ಕಾಲ ಗಂಗವಾಡಿ, ನೊಳಂಬ ವಾಡಿಗಳನ್ನು ಜಯಸಿದ್ದರೆಂದೂ ಹೇಳಿದೆ. ಚೋಳರು ನಿಡುಗಲ್ಲಿನಲ್ಲಿ ನೆಲೆಸಿದ್ದಕ್ಕೆ 1269 ರ ವೀರಗಲ್ಲಿನಲ್ಲಿ ವಿವರಣೆ ಇದೆ

ತುಮಕೂರಿನ ಪ್ರಾಂತಕ್ಕೆ ಮೊದಲಿನಿಂದಲೂ "ಆನೆ ಬಿದ್ದ ಸರಿ ರಾಜ್ಯ" ಎಂಬ ಹೆಸರಿತ್ತು. ಕರಿಗಿರಿ ಮಹಾತ್ಮೆಯಲ್ಲಿ ಈರೀತಿ ಹೇಳಿದೆ. ಬ್ರಹ್ಮನ ಸಭೆಯಲ್ಲಿ ದೇವದತ್ತ ಧನಂಜಯ ಎಂಬ ಇಬ್ಬರು ಗಂಧರ್ವರು ಗಾಯನ ಮಾಡುತ್ತಿದ್ದಾಗ, ಭೃಗು ಋಷಿಯು ಸಂತೋಷದಿಂದ ಅವರನ್ನು ಮತ್ತೊಮ್ಮೆ ಹಾಡಿ ಎಂದು ಕೇಳಿದನು. ಗರ್ವಿ

ಷ್ಠರಾದ ಅವರು ಅವನನ್ನು ಪರಿಹಾಸ್ಯ ಮಾಡುತ್ತಾ "ಫಲಗಳನ್ನು ತಿಂದು ಜೀವಿಸುವ ನಿನಗೆ ಗಂಧರ್ವ ವಿದ್ಯೆಯ ವಿಷಯವೇಕೆ, ನೀನು-ದಂತ ಹೀನವಾದ ಮುದುಕ, ನಿನ್ನ ನೆರೆತ ಗಡ್ಡ ನೋಡಿದರೆ ನಮಗೆ ನಗೆ ಬರುತ್ತದೆ" ಎಂದು ಹೀಯಾಳಿಸಿದರು. ಭೃಗು ಋಷಿ ಕೋಪದಿಂದ ಶಾಪ ಕೊಟ್ಟನು. "ನೀವು ಆನೆ, ಬೆಟ್ಟವಾಗಿ ಭೂಲೋಕದಲ್ಲಿ ಹುಟ್ಟಿರಿ" ಅವರು ಕೇಳಿಕೊಳ್ಳಲಾಗಿ ಋಷಿಯು ಧನಂಜಯನು ಸದಾ ಬೆಟ್ಟವಾಗಿರಬೇಕು. ದೇವದತ್ತನು ಆನೆಯಾಗಿದ್ದು ಕೋಡುಗಲ್ಲಿಂದ ಜಾರಿ ಬಿದ್ದು ಸತ್ತಾಗ ಶಾಪ ವಿಮೋಚನೆ ಎಂದು ಹೇಳಿದನು. ಆಪಕಾರ ಧನಂಜಯನುಬೆಟ್ಟವಾಗಿ ("ಕುಸುಮಾಚಲ") ಅಥವಾ ದೇವರಾಯನದುರ್ಗ )ಜನಿಸಿದನು. ದೇವದತ್ತನು ಆನೆಯಾಗಿ ಜನಿಸಿ ಕೆಲ ಕಾಲಾನಂತರ ಕೋಡುಗಲ್ಲಿಂದ ಜಾರಿ ಬಿದ್ದು ಸತ್ತು ಶಾಪ ವಿಮೋಚನೆ ಹೊಂದಿದನು. ಈ ಆನೆ ಬಿದ್ದ ಸ್ಥಳಕ್ಕೆ "ಆಜೆಬಿದ್ದ ಜರಿ" ಎಂದುಹೆಸರಾಯಿತು. (ಆನೆಗುಂದಿ, ಗಜಾಕುಂಡ ಎಂತಲೂ ಕರೆಯುತ್ತಾರೆ.) ಆನೆಬಿದ್ದರಿ, ಆನೇಸಿದ್ದರಿ ಎಂಬ ಹೆಸರಿನ ಹಳ್ಳಿ ಶಿರಾದ ಉತ್ತರಕ್ಕೆ, ಹಿರಿಯೂರು ತಾಲ್ಲೂಕಿನಲ್ಲಿದೆ ಈ ಹೆಸರು 1269 ರಲ್ಲಿನ ಶಾಸನದಲ್ಲಿ ಕಂಡು ಬರುತ್ತದೆ.

**ನಾಡುಗಳು :-** ಶಾಸನಗಳ ಪ್ರಕಾರ ಈ ತಾಲ್ಲೂಕು 30 ಮೈಲು ಉದ್ದ, 25 ಮೈಲು ಅಗಲವಿದ್ದ ಸುಮಾರು 80 ಚದರ ವಿಸ್ತೀರ್ಣವಾಗಿದ್ದಿತು. ಇದರಲ್ಲಿ ದೇವಗುಂದನಾಡು, ಮರುಗೆರೆನಾಡು, ಹುಲುಕೂಲನಾಡು (ಪೂರ್ವ) ಸೋರಮುತ್ತುಗನಾಡು (ಮಧ್ಯ) ಜೋಳೂರು ನಾಡು (ಪಶ್ಚಿಮ) ಹರುಹೆನಾಡು (ನೈರುತ್ಯ)ಗಳನ್ನು ಒಳಗೊಂಡಿದ್ದವು.

**ಸೀಮೆಗಳು :-** ಶೂರಗಿರಿ ಸೀಮೆ (ಆಗ್ನೇಯ) ಗೂಳೂರು ಸೀಮೆ (ದಕ್ಷಿಣ) ಮೂಕಪಟ್ಟಣ ಸೀಮೆ (ಪಶ್ಚಿಮ) ಕೋಳಾಲ ಸೀಮೆ (ಉತ್ತರ) ದೇವರಾಯನ ದುರ್ಗಕ್ಕೆ ಮೊದಲು ಜಡಕನದುರ್ಗವೆಂಬಹೆಸರಿತ್ತು.

ಈ ದುರ್ಗದ ಇಳಿಜಾರಿನ ಕುಂಬಾರ ಕೆರೆಯನ್ನು ವಿಜಯನಗರದ ಹರಿಹರನ (1376-1404) ಮಗ ಮಹಾಮಂಡಲೇಶ್ವರ ವೀರ ಬುಕ್ಕಣ್ಣ ಒಡೆಯರ ಅಂಗರಕ್ಷಕನಾಗಿದ್ದ ಅಲ್ಲಪ್ಪನಾಯನ ಮಗ. ಪೋಲೀ ನಾಯಕನ ಹೆಸರಿನ ಮೇಲೆ ಪೋಲಸಮುದ್ರ ಎಂದು ಕರೆಯುತ್ತಿದ್ದರು.

ತುಮಕೂರನ್ನು ತುಮೇಗೂರು ಎಂದು 955 ಎ. ಡಿ. ವರ್ಷದ ಶಾಸನದಲ್ಲಿ ಹೇಳಿದೆ. ಈ ಶಾಸನ ಸೋಮೇಶ್ವರ ದೇವಾಲಯದಲ್ಲಿದೆ ಇದೇ ಇಲ್ಲಿಯವರೆಗೆ ಅತ್ಯಂತ ಪ್ರಾಚೀನ ಶಾಸನ. ಇದು ಗಂಗವಂಶದ ಬೂತುಗನ ಕಾಲದ್ದು (925-960) ಈ ಹೆಸರುಬರುವುದಕ್ಕೆ ಅಗ ಹೆದ್ದುಂಬೆ ಗಿಡಗಳು ಕಾಡಿನಂತೆ ಬೆಳೆದಿದ್ದವಂತೆ

ಕೊರಟಗೆರೆ ತಾಲ್ಲೂಕಿನ ತುಂಬಾಡಿ, ಗ್ರಾಮವೂ ತುಂಬೆ ಗಿಡದಿಂದ ಅವರಿಸಲ್ಪಟ್ಟಂತೆ ತೋರುತ್ತದೆ.



ತುಮೆಗೂಡು 1100ರಲ್ಲಿ ಟಂಕೆಹಳ್ಳಿ (ಟಂಕಿ ಊರು) ಆಯಿತೆಂದು ತೋರುತ್ತದೆ. ಇದನ್ನು ಕೈದಾಳದ ಅರಸು ನೃಪರಾಯನು ಟಂಕಿ (ನಗಾರಿ) ಹೊಡೆಯುವವರಿಗೆ ದಾನ ಕೊಟ್ಟಿದ್ದನೆಂದು ಪ್ರತೀತಿ. ಇದು ಕಟ್ಟುಕಥೆ, ನಂಬಲರ್ಹವಲ್ಲ (1)

ಈ ಪ್ರಾಂತವು 700 ರಿಂದ 955ರ ವರೆಗೆ ಗಂಗರಸರಿಂದ 955 ರಿಂದ 1100 ರ ವರೆಗೆ ಚಾಲುಕ್ಯರಿಂದಲೂ, 1638 ರ ವರೆಗೆ ವಿಜಯನಗರದ ಅರಸರಿಂದಲೂ, 1638—1687 ರ ವರೆಗೆ ಶೀರ್ರ್ಯರ ರಣದುಲ್ಲಾ ಖಾನ್ ಮೊದಲಾದವರಿಂದಲೂ, 1687 - 1731 ರ ವರೆಗೆ ಮೈಸೂರು ಒಡೆಯರಿಂದಲೂ, 1731 - 1761ವರೆಗೆ ಒಡೆಯರ ದಳವಾಯಿಗಳಿಂದಲೂ, 1761 - 1775 ರವರೆಗೆ ಹಾಗಲವಾಡಿ ಚನ್ನಬಸಪ್ಪನಾಯಕನಿಂದಲೂ 1775 - 1799 ರ ವರೆಗೆ ಹೈದರ್, ಟಿಪ್ಪೂಸುಲ್ತಾನರಿಂದಲೂ, 1799 - ಮೈಸೂರು ಒಡೆಯರಿಂದ ಆಳಲ್ಪಟ್ಟಿತು.

### ತುಮಕೂರು ನಗರ ಇತಿಹಾಸ

ತುಮಕೂರನ್ನು ಮೈಸೂರು ಒಡೆಯರ ವಂಶದ ಕಾಂತೀ ಅರಸು ಕಟ್ಟಿಸಿ, ಕೋಟೆಯನ್ನು, ಪೇಟೆಯನ್ನೂ ಕಟ್ಟಿಸಿದನು. ಈಗ ಕೋಟೆ ಬಿದ್ದುಹೋಗಿದೆ. ಈಗಿನ ಅಗ್ರಹಾರವೇ ಕೋಟೆಯಾಗಿತ್ತು. ಈಗಿನ ಹೊರಪೇಟೆ ಆಗಿನ ಪೇಟೆಯಾಗಿತ್ತು. ಇದಕ್ಕೆ ಹತ್ತಿರವಾಗಿ ದೊಡ್ಡಕೆರೆ ಇದೆ. ಇದು ದೇವರಾಯನದುರ್ಗಕ್ಕೆ ನೈರುತ್ಯದಲ್ಲಿದೆ

1928 ರಲ್ಲಿ ಕುಡಿಯುವ ನೀರಿಗಾಗಿ ನಲ್ಲಿಗಳನ್ನು ಹಾಕಲಾಯಿತು.. ಅದಕ್ಕೆ ಮುಂಚೆ ರಾಟೆ ಭಾವಿಗಳ ಬಳಕೆ ಹೆಚ್ಚಾಗಿತ್ತು.

ಈಗ ಬಾಳನ ಕಟ್ಟೆ ಎಂದು ಕರೆಯುವ ಪುಷ್ಕರಣಿಯನ್ನು 400 ವರ್ಷಗಳ ಹಿಂದೆ ರಿಪೇರಿ ಮಾಡಿಸಿದಂತೆ ತಿಳಿಯುತ್ತದೆ ಇದನ್ನು ಸುಮಾರು 921ರಲ್ಲಿ ಬಾಣ ಅರಸನಾದ ಪೃಥ್ವೀಪತಿ ಕಟ್ಟಿಸಿರಬಹುದು. ಕೆಲವರು ಇದನ್ನು ಬಾಳಯ್ಯಗೌಡನು ಕಟ್ಟಿಸಿದನೆಂದು ಹೇಳುತ್ತಾರೆ. ಹತ್ತಿರದಲ್ಲಿ ಬಾಳೇಗೌಡನ ಪಾಳ್ಯವಿದೆ. ಈಗ ಬಾಳನಕಟ್ಟೆನೀರು ಕೆಟ್ಟುನಾರುತ್ತದೆ. ಮುಚ್ಚಿಬಿಟ್ಟರೆ ತೊಂದರೆಯಾಗಲಾರದು. ಈಗ ಕಾರಂಜಿ ಭಾವಿಗಳು ಆಗುತ್ತಿವೆ (ಬೋರ್‌ವೆಲ್ಸ್, ಅಗ್ರಹಾರದವರು ಸ್ನಾನಾದಿಗಳಿಗಾಗಿ ಉಪಯೋಗಿಸಲು ಒಂದು ದೊಡ್ಡ ಕೊಳವು ಈಗಿನ ಪೂರ್ಣಯ್ಯನ ಛತ್ರದ ಬಳಿ 900 ಎ.ಡಿ. ಕಟ್ಟಲ್ಪಟ್ಟಿತ್ತು. ಆದರೆ ಅನಾರೋಗ್ಯ ಕಾರಣದಿಂದ ಇದನ್ನು ಈಗ ಮುಚ್ಚಿಬಿಟ್ಟಿದ್ದಾರೆ.

ನೀರಿನ ಪೂರೈಕೆಗಾಗಿ 955 ರಲ್ಲಿ, ಈಗಿನ ಸೋಮೇಶ್ವರ ದೇವಾಲಯದ ಬಳಿ ಕೆರೆಯನ್ನು ಕಟ್ಟಲಾಗಿತ್ತು ಈ ಉದ್ದೇಶಕ್ಕಾಗಿ 8 ಮುಖಂಡರ ಸಮಿತಿಯೊಂದನ್ನು ಗೊತ್ತುಮಾಡಲಾಗಿತ್ತು. ಇದಕ್ಕಾಗಿ ಬಿಟ್ಟಿಯಣ್ಣ ಎಂಬುವನನ್ನು ಅಧಿಕಾರಿಯನ್ನಾಗಿ ಮಾಡಿ ಅವನಿಗೆ 12ಖಂಡುಗ ಬಿತ್ತುವಟ್ಟ ಭೂಮಿಯನ್ನು, ಬ್ರಹ್ಮಪುತ್ರ (ಬ್ರಹ್ಮವೃತ್ತ) ನೆಂಬ ಬಿರುದನ್ನೂ, ಕಂದಮಯ್ಯನ ಮಗ ಅಜ್ಜಮಯ್ಯನು ಕೊಟ್ಟನೆಂದೂ ಉಲ್ಲೇ

ಬಿಸಿದೆ (ಕೆರೆಗಳ ರಿಪೇರಿಗೂ, ಕೆರೆಯ ನೀರನ್ನು ಅನಾವಶ್ಯಕವಾಗಿ ಪೋಲು ಮಾಡದಂತೆ ನೋಡಿಕೊಳ್ಳುವುದಕ್ಕೆ ಇಂಥ ಸಮಿತಿಗಳನ್ನು ಏರ್ಪಡಿಸುವುದು ಸರ್ವೇಸಾಮಾನ್ಯವಾಗಿತ್ತೆಂದೂ ರಾಜೇಂದ್ರ ಚೋಳನ 1019ನೇ ವರ್ಷದ ಶಾಸನದಿಂದ ತಿಳಿಯುತ್ತದೆ.

ಲಕ್ಷ್ಮೀಕಾಂತ ದೇವಾಲಯವು ಇನ್ನೊಂದು ಪುರಾತನ ದೇವಾಲಯ. ಇದನ್ನು 1560 ರಲ್ಲಿ ಕಟ್ಟಿಸಲಾಯಿತೆಂದು ಅಲ್ಲಿನ ಶಾಸನದಿಂದ ತಿಳಿಯುತ್ತದೆ. ಇದು ನವರಂಗದ ಬಲಗಡೆ ಗೋಡೆಯ ಮೇಲೆ ಇದೆ. ತೆಲುಗು ಭಾಷೆಯಲ್ಲಿದೆ ಸದಾಶಿವ ರಾಯಲು (1542 – 1570) ವಿಜಯನಗರ ರತ್ನಸಿಂಹಾಸನಾರೂಢುಲೈ ಪೃಥ್ವೀ ಸಾಮ್ರಾಜ್ಯಂ ಚೇಸ್ತುಂಡಗಾನು ಶ್ರೀಮನ್ ಮಹಾಮಂಡಲೇಶ್ವರ, ಗೋತ್ರಂ ಅಶ್ವಲಾಯನ, ಸೂತ್ರಂ ಶ್ರೀ ದೇವಪ್ಪದಾಸಿಗರಾಜಗಾರಿ ಪುತ್ರುಲು ಜಗನ್ನಾಥದೇವಯ್ಯ ಮಹಾರಾಜುಲು, ಆನೆಬಿದ್ದಜರಿ ರಾಜ್ಯಮುಲು" ದೇವರಿಗೆ ಪಂಡಿತಾರಾಧನೆಗೆ ದತ್ತಿ ಬಿಟ್ಟಿರುವುದನ್ನು ಹೇಳಿದೆ. ಶಾಸನದ ಕೊನೆ ಸ್ಪಷ್ಟವಾಗಿಲ್ಲ. ಈ ದೇವಾಲಯ ದ್ರಾವಿಡ ಶೈಲಿಯಲ್ಲಿದೆ. ವಿಗ್ರಹ ಪದ್ಮಸನಾರೂಢವಾಗಿದೆ, ವಿಗ್ರಹ 4½ ಅಡಿ ಎತ್ತರವಾಗಿದೆ. ಲಕ್ಷ್ಮೀವಿಗ್ರಹವಿದೆ.

ತುಮಕೂರಿನ ಮಾರಿಗುಡಿಯ ಬಳಿ ಇರುವ ಶಾಸನ 1610 ನೇ ವರ್ಷದ್ದು. ಇಮ್ಮಡಿ ಬಸವನಾಯಕ ಒಡೆಯರ ತಮ್ಮ ಮಗಳಿಗೆ ಮದುವೆ ತೆರೆದ ವಿಚಾರ ಹೇಳಿದೆ.

ಕೋಡಿ ಬಸವನ ಗುಡಿಯ ಗರುಡಗಂಬದಲ್ಲಿ–"ಮಲ್ಲಶೆಟ್ಟಿ ಮಗ ಪರ್ವತನಾಯಕನು ತನ್ನ ತಂದೆ ತಾಯಿಗಳಿಗೆ ಧರ್ಮವಾಗಬೇಕೆಂದು ಸಮೀಪದ ಗುಡ್ಡದಿಂದ ತಂದ ಕಲ್ಲಿನಿಂದ ಗರಡು ಗಂಬ ಸ್ಥಾಪಿಸಿದನು" ಎಂದು ಕೆತ್ತಲಾಗಿದೆ ಇದರ ಕಾಲ 1575, ಶ್ರೀ ಕೃಷ್ಣದೇವರಾಯನ ಕಾಲದ್ದು.)

**ಅಪ್ಪಯ್ಯನಾಯಕನ ವೀರಗಲ್ಲು:**– 1269ನೇ ವರ್ಷದ್ದು. ಇದು ಕೆರೆ ಕೆಳಗೆಕರಣೀಕ ನಲ್ಲಪ್ಪನವರ ತೋಟದಲ್ಲಿದೆ. ಇದು "ಹೊಯ್ಸಳರಕಾಲದ್ದು" ಮುಮ್ಮಡಿ ನರಸಿಂಹ (1254–1292)ನು ದ್ವಾರಸಮುದ್ರದಲ್ಲಿ ಆಳುತ್ತಿದ್ದಾಗ ಆನೆಬಿದ್ದಜರಿ ರಾಜ್ಯದಲ್ಲಿ ಮಹಾಪ್ರಧಾನ ವೀರಚಿಕ್ಕೇತಯ್ಯ ದಣ್ಣಾಯಕನು ಆಳುತ್ತಿದ್ದನು. ಇವನ ಕೈಕೆಳಗೆ ಸರದಾರ ಅಪ್ಪಯ್ಯ ನಾಯಕನೆಂಬುವನಿದ್ದನು. 1268-1269 ರಲ್ಲಿ ನಿಡುಗಲ್ಲು ಚೋಳರ ಸನಾದ ಇಮ್ಮಡಿ ಇರುಂಗೋಳದೇವನ ಸಕಲ ಸೇನೆಯನ್ನೊಳಗೊಂಡು ಆನೆಬಿದ್ದಜರಿ ರಾಜ್ಯಕ್ಕೆ ದಂಡೆತ್ತಿ ಬಂದು ಗೋವುಗಳನ್ನು ಕೊಂಡೊಯ್ದಾಗ, ಗೊಳ್ಳಯ್ಯನಾಯಕನು ಸೈನಿಕರನ್ನೂ ಬೆನ್ನಟ್ಟಿಹೋಗಿ, ಅನೇಕರು ಕೊಂದು, ಗೋವುಗಳನ್ನು ಹಿಂತಿರುಗಿಸಿಕೊಂಡು ಬರುವಾಗ ರಣರಂಗದಲ್ಲಿ ಬಿದ್ದು ಸತ್ತನು"

ಈ ವೀರಗಲ್ಲು ಚೋಳರಿಗೂ, ಹೊಯ್ಸಳರಿಗೂ ನಡೆದ ಯುದ್ಧವನ್ನು ಸೂಚಿಸುತ್ತದೆ. ಚೋಳರನ್ನು ಮೈಸೂರು ದೇಶದಿಂದ ವಿಷ್ಣುವರ್ಧನನು ಓಡಿಸಿದನು. ಆದರೆ



ಒಂದು ಸಂತತಿಯು ನಿಡುಗಲ್ಲಿನಲ್ಲಿ 8 ನೇ ಶತಮಾನದಿಂದಲೂ ನಡೆದು ಕೊಂಡು ಬಂದಿದ್ದು, ಹೊಯ್ಸಳರ ಧಾಳಿಗೆ ಸಿಕ್ಕಿರಲಿಲ್ಲ. ಈ ವಂಶದವರು ನಿಡುಗಲ್ಲಿನ ಪ್ರದೇಶವನ್ನು ಗೆದ್ದು ಶಿರಾ ತಾಲ್ಲೂಕಿನಲ್ಲಿರುವ ಹೇಮಾವತಿ ಎಂಬ ಗ್ರಾಮವನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರು. ಹೇಮಾವತಿ ಗ್ರಾಮಕ್ಕೆ ಹೆಂಜೇರು, ಪೆಂಜೇರು, ಪೆರುಂಜೇರು, ಎಂದು ಕರೆಯಲಾಗುತ್ತಿತ್ತು. ಈ ಅರಸರು ನಿಡುಗಲೆ ಚೋಳ ಮಹಾರಾಜರೆಂದು ಹೆಸರಿಟ್ಟುಕೊಂಡಿದ್ದರು. ಇವರು 1292 ರ ವರೆಗೆ ಅಲ್ಲಿ ಆಳಿದರು. ಇವರಲ್ಲಿ ಇಮ್ಮಡಿ ಇರುಂಗೋಳದೇವನೆಂಬುವನು 1232 ರಿಂದ 1277 ರ ವರೆಗೆ ಆಳಿದನು. 1285 ರಲ್ಲಿ ಹೊಯ್ಸಳ ನರಸಿಂಹನು ದೊಡ್ಡ ಸೈನ್ಯವನ್ನು ತೆಗೆದುಕೊಂಡು ಹೋಗಿ ಆಗಿನ ಮುಮ್ಮಡಿ ಇರುಂಗೋಳದೇವನನ್ನು ಸೋಲಿಸಿ ಕೋಟೆಗಳನ್ನು ವಶಪಡಿಸಿಕೊಂಡನು. ಇವನ ಮಗ- ಭೋಗ ಇವನ ಮಗ ಬೊಮ್ಮ, 1292 ರ ವರೆಗೆ ಇದ್ದರು. ನಂತರ ಇವರ ವಂಶ ನಿರ್ನಾಮವಾಯಿತು.

ತುಮಕೂರಿನಲ್ಲಿ 3 ತಾಮ್ರ ಶಾಸನಗಳು ದೊರೆತಿವೆ ಕೆಸ್ತೂರು ಶ್ರೀ ನಿವಾಸಾಚಾರ್ಯರ ವಶದಲ್ಲಿದ್ದ ಒಂದು ತಾಮ್ರ 157ನೇ ವರ್ಷದ್ದು. ಅದರಲ್ಲಿ ಒಂದನೇ ಶಾಸನ ತಿರುಮಲರಾಯನು (1570–1574) ತೆರೆಯೂರು ಇಮ್ಮಡಿ ತಿಮ್ಮನಾಯಕನ ಮಗ ಮುಮ್ಮಡಿ ತಿಮ್ಮಪ್ಪ ನಾಯಕನ ಅರಿಕೆ ಪ್ರಕಾರ, ತುಮಕೂರಿಗೆ ಪಶ್ಚಿಮದಲ್ಲಿ 6 ಮೈಲಿಗಳ ದೂರದಲ್ಲಿ ಮಲ್ಲಸಂದ್ರ ಗ್ರಾಮವನ್ನು ಅಗ್ರಹಾರ ಮಾಡಿ ಅಲ್ಲಿನ ಭೂಮಿಯನ್ನು 100 ವೃತ್ತಿಗಳನ್ನಾಗಿ ವಿಂಗಡಿಸಿ 100 ಬ್ರಾಹ್ಮಣರಿಗೆ ದಾನ ಕೊಟ್ಟದುದನ್ನು ಹೇಳಿದೆ. ಈ ದಾನ ಪ್ರತಿ ಪಡೆದ ಪ್ರತಿಯೊಬ್ಬರ ಗೋತ್ರ, ಸೂತ್ರ ಹೇಳಿರುವುದು. ಗೂಳಾರ್ ನವರಿಗೆ 3 ವೃತ್ತಿಗಳನ್ನೂ ಕೊಟ್ಟಿರುವುದನ್ನು ತಿಳಿಸಿದೆ. ಒಂದು ವೃತ್ತಿಯನ್ನು ಗದುಗಿನ ನಾರಣಪ್ಪನ ವ ಗನಿಗೆ ಕೊಟ್ಟಿದೆ.

2 ತುಮಕೂರು ವೆಂಕಟರಾಮ ಶಾಸ್ತ್ರಿಗಳ ವಶದಲ್ಲಿದ್ದ 183 ರ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದ ತಾಮ್ರ ಶಾಸನದಲ್ಲಿ- ಮು.ಕೃ. ಒಡೆಯರು ಶ್ರೀರಂಗಪಟ್ಟಣದಲ್ಲಿ ಆಳುತ್ತಿರುವಾಗ, ತುಮಕೂರಿನಲ್ಲಿ ದೇವರ ಭಕ್ತರಾದ ಶೆಟ್ಟಿನಂಜಯ್ಯ ಮೊದಲಾದವರು 10 ಮಂದಿ ವರ್ತಕರು ತಮಗಾದ ಯಾವುದೋ ಒಂದು ಅನಾನುಷ ಉಪಕಾರಕ್ಕಾಗಿ ತುಮಕೂರಿನ ಯಜುರ್ವೇದಿ ರಾಮಾವಧಾನಿಗಳ ಮಗ ದಿವಾಕರ ಶಾಸ್ತ್ರಿಗೆ ತಮ್ಮ ಮನೆಗಳಲ್ಲಿ ನಡೆಯುವ ಶುಭ ಕಾರ್ಯಗಳಲ್ಲಿ ಎರಡು ರೂಪಾಯಿಗಳು ತಲತಲಾಂತರದವರೆಗೆ ಕೊಟ್ಟು ಕೊಂಡು ಬರುತ್ತೇವೆ ಎಂದು ಒಪ್ಪಿಕೊಂಡಿರುವುದನ್ನು ಹೇಳಿದೆ.

1760ರ ಶಾಸನವು ಹಾಗಲವಾಡಿಯ "ಇಮ್ಮಡಿ ಚನ್ನಬಸಪ್ಪನಾಯಕನ ಕಾಲದ್ದು" ಇದರಲ್ಲಿ ರಾಯರ ಸಂಬಂಧಿಕರಾದ ಶ್ರೀಮಾನ್ ಮಹಾನಾಡಪ್ರಭು ಮುಮ್ಮಡಿ ಹೊನ್ನಪ್ಪ ಗೌಡರಯ್ಯನವರು (1748-1776) ಗುಬ್ಬಿ ಹೊಸಳ್ಳಿಯಲ್ಲಿ

ರಾಜ್ಯವಾಳುತ್ತಿದ್ದಾಗ ಗುಬ್ಬಿ ಪೇಟೆ ಚೆನ್ನಶೆಟ್ಟಿ ಎಂಬವನಿಗೆ "ಶೆಟ್ಟಿ" ತನವನ್ನು ಕೊಟ್ಟು, ಗುಬ್ಬಿ ಕೆರೆ ಕೆಳಗೆ, ತರಿ ಮತ್ತು ಖುಷ್ಕಿ ಜಮೀನನ್ನು ಕೊಡಿಗೆ ಹಾಕಿ ಕೊಟ್ಟಿದ್ದನ್ನು ಹೇಳಿದೆ. ಹಾಗಲವಾಡಿಯ ಪಾಳೆಯಗಾರರು ತಮ್ಮ ಹೆಸರ ಮುಂದೆ ಅಯ್ಯನವರು ಎಂದು ಸೇರಿಸಿಕೊಳ್ಳುವ ವಾಡಿಕೆ ಇತ್ತು. ಈ ಪಾಳೆಯಗಾರರಲ್ಲಿ 12 ನೆಯವನಾದ ಇಮ್ಮಡಿ ಚೆನ್ನಬಸಪ್ಪನಾಯಕ (1760-76 ತುಮಕೂರನ್ನು ಗೆದ್ದುಕೊಂಡಿದ್ದನು. ಇವನು 1776ರಲ್ಲಿ ಹೈದರ್ ಅಲಿಯಿಂದ ಸೆರೆ ಹಿಡಿಯಲ್ಪಟ್ಟ ಸ್ವಲ್ಪ ಕಾಲದಲ್ಲಿಯೇ ಅವನು ಸೆರೆಯಲ್ಲಿ ಸತ್ತನು. ಅನಂತರ ಅವನ ಮಗ ಮುದಿಯಪ್ಪನಾಯಕನೆಂಬ ಬಾಲಕನಿಗೆ 3 ಹಳ್ಳಿಗಳ ಜಹಗೀರನ್ನೂ ಕೊಡಲಾಯಿತು.

ತುಮಕೂರು ನಗರ ಭಾಗ 2 : ಶಾಲಿವಾಹನ ಶಕ 1670 (1687 ಎ.ಡಿ.) ರಲ್ಲಿ ಚೈತ್ರ ಶುದ್ಧ ಪೂರ್ಣಿಮೆಯ ದಿನ ಚಿಕ್ಕದೇವರಾಜ ಒಡೆಯರು (1672-1704) ತುಮಕೂರನ್ನು ಶಿರಾ ನವಾಬನಿಂದ ಗೆದ್ದುಕೊಂಡರು.

1931 ರ ಜನಗಣತಿ ಪ್ರಕಾರ 18,604 ಪ ಜೆಗಳಿದ್ದಾರೆ.

ತುಮಕೂರಿನ ಭಾಗಗಳು : ಗರಡಿ ಚಿಕ್ಕನ ಪಾಳ್ಯ ಅಥವಾ ಸೋಮೇಶ್ವರ ಬಡಾವಣೆ, ಗುಬ್ಬಿ ರೋಡ್ ಬಡಾವಣೆ, ಕೃಷ್ಣರಾಜ ಬಡಾವಣೆ, ಜಯಚಾಮರಾಜ ಬಡಾವಣೆ, ಕುರೀಪಾಳ್ಯ, ಕಂಬಾಳಯ್ಯನ ಪಾಳ್ಯ, ಹಾಲಶೆಟ್ಟಿ ಪಾಳ್ಯ, ಹನುಮಂತನ ಪಾಳ್ಯ, ಕೆಂಪಸಿದ್ದನ ಪಾಳ್ಯ, ಕಡೇಕೋಡಿ ಪಾಳ್ಯ, ನಾಗಣ್ಣನ ಪಾಳ್ಯ, ಸಾದೇ ಪಾಳ್ಯ, ಮುಖ್ಯವಾದುವು. ಈ ಊರಿನ ಬೆಳವಣಿಗೆಯಲ್ಲಿ ವಿಶೇಷ ಶ್ರದ್ಧೆ ವಹಿಸಿದವರು ಕ್ರಿಶ್ಚಿಯನ್ ವೆಸ್ಲಿಯನ್ ಮಿಷನರಿಯವರು (1857) ಇವರು 1837 ರಲ್ಲಿ ಗುಬ್ಬಿಯಲ್ಲಿ 1840 ರಲ್ಲಿ ಕುಣಿಗಲ್‌ನಲ್ಲಿ ಕೆಲಸ ಆರಂಭಿಸಿದ್ದರು. ಇವರು ತುಮಕೂರಿನ ಬಳಿಯ ಬೆತ್ತಲೂರು, ದೇವನೂರುಗಳಲ್ಲಿಯೂ ನೆಲಸಿದರು. ಇದರು ಚರ್ಚುಗಳನ್ನೂ ಕಸುಬಿನ ಕೇಂದ್ರಗಳನ್ನೂ, ಶಾಲೆಗಳನ್ನೂ ಕಟ್ಟಿ, ಸೌಜನ್ಯ, ನಾಗರೀಕತೆ, ವಿದ್ಯಾಭ್ಯಾಸ, ಧರ್ಮಪ್ರಚಾರ ಮಾಡಿದರು. ಇವು ನಗರಕ್ಕೆ ಆದರ್ಶಪ್ರಾಯವಾಗಿದೆ. ಕೋರ್ಟು ಕಛೇರಿಗಳು ಹಿಂದೆ ದೇವರಾಯನ ದುರ್ಗದಲ್ಲಿದ್ದವು. ಈಚೆಗೆ ತುಮಕೂರಿಗೆ ಬಂದಿವೆ. ಡಾಬ್ಸ್ ಬಂಗಲೆ ಮೊದಲಾದವು ಕಟ್ಟಲ್ಪಟ್ಟವು.

ಪೌರ ಸಭೆಯ ಆಡಳಿತಕ್ಕನುಗುಣವಾಗಿ ಸೇರಿದ ಪ್ರದೇಶವು 4 ಚ. ಮೈಲಿಗಳು ಳ್ಳದ್ದಾಗಿದೆ. ಇದು ಸಮುದ್ರಮಟ್ಟದಿಂದ 2,678 ಅಡಿ ಎತ್ತರವಿದೆ. ಹತ್ತಾರು ವರ್ಷಗಳಲ್ಲಿ ಹೆಚ್ಚು ಅಭಿವೃದ್ಧಿಯಾಗುವ ಚಿಹ್ನೆಗಳು ಹೇರಳವಾಗಿವೆ. ವ್ಯಾಪಾರ ಸೌಲಭ್ಯಗಳೂ, ಎಂಟು ದಿಕ್ಕುಗಳಿಗೂ ಛಾಟಾ ಮಾರ್ಗ, ರೈಲು ಮಾರ್ಗ, ಸುಂದರ ಉದ್ಯಾನ ವಿನೋದ ವಿಶ್ರಾಂತಿ ಮಂದಿರಗಳೂ ಈ ಪಟ್ಟಣವನ್ನು ಆದರ್ಶಣೀಯವಾಗಿ ಮಾಡಿದೆ.

(ಆಧಾರ : ಎ. ಶ್ರೀಕಂಠಯ್ಯ, ಪ್ರಬುದ್ಧ ಕರ್ನಾಟಕ, ನಂ. 91, ವರ್ಷ: 1942)

ಸಿದ್ಧಗಂಗಾ



## ಬಸವತತ್ತ್ವ ರತ್ನಾಕರ-6

### (ವಚನಕಾವ್ಯ ಸುಧಾಸಾಗರ)

-ಶ್ರೀ ಮೋಟಗಿ ಮಲ್ಲಿಕಾರ್ಜುನ "ಕನ್ನಡ ಕವಿಕಾಳಿದಾಸ" ಅಥಣಿ (ಬೆಳಗಾವಿ ಜಿಲ್ಲೆ)

**ಧಾರಣ—ಧ್ಯಾನ—ಸಮಾಧಿ [52]**

"ಇಷ್ಟಲಿಂಗವನು ಹಗಲಿರುಳು ನೆನೆವ ಏಕನಿಷ್ಠೆಯೆ
'ಧ್ಯಾನ' ವೆನಿಸಿಹುದು ನೋಡಾ.
ಆ ಇಷ್ಟಲಿಂಗದ ಅರಿವಿನಲ್ಲಿ ಏರಕವಾದ ಮನೋಲಯವೆ
'ಸಮಾಧಿ'ಯೆನಿಸಿಹುದು ನೋಡಾ.
ಆ ಮನೋಲಯಕ್ಕೆ ನೆಲೆಯಾಗಿಪ್ಪ ಇಷ್ಟಲಿಂಗವನು
ಭಕ್ತಿ ಭಾವಯುಕ್ತ ಶಿವೋಪಚಾರ ಕ್ರಿಯೆಗಳಿಂದ
ಎಡೆ ಬಿಡದೆ ದೇಹದ ಮೇಲೆ ಧರಿಸಿರ್ಪುದೇ
'ಧಾರಣ' ಮೆನಿಸಿಹುದು ನೋಡಾ.
ಶ್ರೀ ಶೈಲ ಮಲ್ಲಿಕಾರ್ಜುನ."

**ಭಕ್ತಿಯೋಗಿ. [53]**

"ಶರಣನ ಅಂಗೇಂದ್ರಿಯ ಲಿಂಗೇಂದ್ರಿಯದಲ್ಲಿ,
ಮನ ಲಿಂಗ ಮನದಲ್ಲಿ, ಬುದ್ಧಿ ಲಿಂಗ ಬುದ್ಧಿಯಲ್ಲಿ,
ವಿಷಯ ಲಿಂಗ ವಿಷಯದಲ್ಲಿ ಬೆರೆದು ಏಕವಾಗಿ,
ಸಕಳೇಂದ್ರಿಯಂಗಳು ಶಿವವಾಗಿ ನಿರ್ಮಳವಾಗಿಪ್ಪುವು ನೋಡಾ.
ಲೋಕ ಜಾಡ್ಯತೆಗಳಿಲ್ಲದೆ, ದೈಹಿಕತೆಯಿಲ್ಲದೆ,
ಯಾವ ಆವರಣವೂ ಇಲ್ಲದೆ ನಿರ್ಲೇಪವಾಗಿಪ್ಪುವು ನೋಡಾ.
ಇಂತಪ್ಪ ಶರಣನು ಭಕ್ತಿಯೋಗಿಯಾಗಿ ಬೆಳಗುತಿಪ್ಪನು ನೋಡಾ.
ಶ್ರೀ ಮಲ್ಲಿಕಾರ್ಜುನ."

### ಲಿಂಗಯೋಗದಲ್ಲಿ "ಮಹಾಲಿಂಗವೃಕ್ಷ" [54]

### ಪರಾಪ್ರಕೃತಿ ಪ್ರಭೆ

:-ಶ್ಲೋಕ ॥ ತೇಜಃ ಪುಂಜ ಪರಂಜ್ಯೋತಿ। ಓಜಸ್ವಿನಿಂ ಪ್ರಜ್ವಲಿಸಿ ॥
ನೈಜದಾ ಭಕ್ತಿಯಿಂಧೀಹ್ಯ। ಪ್ರಾಜೀವದೊಳ್ ಎಸೆವುವಯ್ ॥1॥

**ಮಹಾಲಿಂಗ**

ಕಂದ ॥ ಲಿಂಗದ ವೃಕ್ಷಕೆ ಪಣ್ಗಳ್
ಲಿಂಗಮೆನೆ ಮಿಗೆ ಸೊಗಯಿಸಿ ವಿರಾಜಿಸುತಿರ್ಕುಮ್ ॥
ಲಿಂಗದ ಬೀಜದೆ ವೃಕ್ಷಮ್ ।
ಹಿಂಗದೆ ತಾನಡಗೆ ಬೀಜವೃಕ್ಷ ನ್ಯಾಯಮ್॥1॥

"ಧರ್ಮಜ್ಞಕವಿ "ಕೃತ "ಲಿಂಗವಿಲಾಸ" (ಸೆತ್ಕಾವ್ಯಸೌರಭ)

"ಆಡುವಲ್ಲಿ, ನೋಡುವಲ್ಲಿ, ಕ್ರೀಡಿಸುವಲ್ಲಿ,
ಪಡಿಪದಾರ್ಥಮಂ ಹಿಡಿಯುವಲ್ಲಿ, ವಿಷಯಮಂ ಭೋಗಿಸುವಲ್ಲಿ,
ಸುಖಾನುಭವಮಂ ಪಡೆವಲ್ಲಿ, ದೇಹಮಂ ಬಿಡುವೆಡೆಯಲ್ಲಿ,
ಸ್ವಾರ್ಥವಾಸನೆಯಿಲ್ಲದೆ ಲಿಂಗಕಳೆ ಲಿಂಗಗುಣ-ಲಿಂಗಯೋಗಂಗಳಲ್ಲಿ
ಬೆರಗುವಡೆದ ಆ ಮಹಾನುಭಾವನನ್ನು ಬಣ್ಣಿಸಲಳವಲ್ಲವಯ್ಯಾ!
ಕೇಳಾ, ಶ್ರೀ ಶೈಲಮಲ್ಲಿಕಾರ್ಜುನ

**ಅನುಭಾವ ಜ್ಯೋತಿ**

ತ್ರಿಪದಿ ॥ ಭಕ್ತಿಪಥ ಮೊದಲೆನೆ! ಮುಕ್ತಿಸಾಧನಕೆ! ಆತ್ಮ-
ಶಕ್ತಿಯನುಭಾವ ಜ್ಯೋತಿ ತಳೆದು ಮನುಜ!
ಮುಕ್ತಿಯನು ಸಾಧಿಸೊ! ಧರ್ಮಜ್ಞ ॥50॥

**ಶರಣ ಜೀವನ**

ನೂರು ಕಾಲ-ಬಾಳಿ ಫಲವೇನು ಹದ್ದಿನಂತೆ!
ವೀರಭಕ್ತನ ಮೂರುದಿನ ಬದುಕು ಲೇಸು!
ಧಾರಿಣಿಗೆ ಬೆಳಕು! ಧರ್ಮಜ್ಞ ॥51॥

"ಮಹಾಪುರುಷರ ಚರಿತ್ರೆಗಳು" ಮತ್ತು "ದೇವಪುರುಷರ ಚರಿತ್ರಾ ವೃತ;
"ಕನ್ನಡ ಕವಿ ಕಾಳಿದಾಸ್, ಕೃತೇ (ಸಹಸ್ರದ್ವಯ ತ್ರಿಪದಿಕಾವ್ಯ)

**"ತತ್ತ್ವಮಸಿ" ಮಹಾವಾಕ್ಯಾರ್ಥ [55]**

"ತತ್ಪದವೆ ಲಿಂಗವಯ್ಯಾ
ತ್ವಂ ಪದವೆ ಅಂಗವಯ್ಯಾ
ಅಸಿ ಪದವೆ ಅವೆರಡರ ಸಂಗ-ಸಮರಸವಯ್ಯಾ!
ಇಂತು ಶ್ರೀ ಗುರುದೇವನು ನಿರೂಪಿಸಿರ್ದ
"ತತ್ತ್ವಮಸಿ" ಮಹಾವಾಕ್ಯಾರ್ಥವಂ ಅರಿದು
ಅನುಭವವನ್ನು ಪಡೆದ ಬಳಿಕ, ಉಳಿದ
ಆಗಮಂಗಳ ಅರಿವು ಅಗತ್ಯವಿಲ್ಲವಯ್ಯಾ
ಶ್ರೀ ಗುರುದೇವನ ವಾಕ್ಯವೇ ಶಿಷ್ಯಂಗೆ ಪ್ರಮಾಣ-
ಕಾಣಾ, ಶ್ರೀಶೈಲಮಲ್ಲಿಕಾರ್ಜುನ



**ಲಿಂಗ ಸುಖ ಸಿದ್ಧಿ [56]**

"ಲಿಂಗವಂತನ ಮನಸ್ಸು ಎಲ್ಲಿ ವಿಶ್ರಾಂತಿ ಪಡೆಯುವುದೊ
ಅಲ್ಲಿ ಲಿಂಗಸುಖ ಸಿದ್ಧಿ ನೋಡಾ.
ಮನಸ್ಸು ಎಲ್ಲಿ ಸೊಗವಡೆವುದೊ
ಅಲ್ಲಿ ಲಿಂಗದ ನಿಲುಕಡೆ ನೋಡಾ.
ಮನಸ್ಸು ಎಲ್ಲಿ ಕ್ರೀಡಿಸುವುದೊ
ಅಲ್ಲಿ ಮಹಾಲಿಂಗ ಪೂಜೆಯಾಗಿ ಪರಿಣಮಿಸುವುದು ನೋಡಾ.
ಇದುವೆ ಸತ್ಯಸಂಪತ್ತು ಇದುವೆ ನಿತ್ಯಪರಮಾರ್ಥ
ಕೈವಲ್ಯಪದ ನೋಡಾ, ಶ್ರೀಶೈಲಮಲ್ಲಿಕಾರ್ಜುನ!"

**ಅಂಗ-ಲಿಂಗ ಸುಖೋಪ ಭೋಗ [57]**

"ಪ್ರಿಯತಮೆಯು ತನ್ನ ಪ್ರಾಣಕಾಂತನಿಗೆ
ಪರಮ ರತಿಯಿಂದ ಪ್ರೀತಿಗಾಸ್ಪದಮಾದ ತನ್ನ
ಮೈಯಪ್ಪುಗೆಯಾಲಿಂಗನಮಂ ಸಮರ್ಪಿಸಿ
ಆ ಸುಖಮಂ ತಪ್ಪದೆ ಭೋಗಿಸುತಿಪ್ಪ ಕಲೆಗಳಾ ಎಚ್ಚರಿಕೆಯೋಲ್
ಅಂಗ ಲಿಂಗ ಸುಖೋಪ ಭೋಗಮಿದತ್ಯಂತ
ಸೂಕ್ಷ್ಮಮಾಗಿ ಶುಭಪ್ರದಮಾಗಿ
ದಿವ್ಯರಸಾಮೃತವಾಗಿಹುದಲ್ತೆ?
ಹೇಳಾ! ಶ್ರೀ ಶೈಲಮಲ್ಲಿಕಾರ್ಜುನ!"

**ಹರನ ಭಕ್ತ-ಮರಣ ವಿಮುಕ್ತ [58]**

"ಲಿಂಗ ಭಕ್ತನ ನಡೆ ಚೆನ್ನ. ನುಡಿಚೆನ್ನ ನೋಡಾ.
ಕ್ರಿಯಾನಿಷ್ಠಲಿಂಗ ಭಕ್ತನೆ ಶ್ರೇಷ್ಠ ನೋಡಾ.
ಮನಮೆಚ್ಚಿ ನಡೆವ ಲಿಂಗಭಕ್ತ ಮರಣ ವಿಮುಕ್ತ ನೋಡಾ.
ಅನಾದಿ ಮಾಯಾ ರಹಿತ ಲಿಂಗ ಭಕ್ತ ದೃಕ್ಕ್ರಿಯಾ ಸಮರ್ಥ ನೋಡಾ.
ಇಂತಪ್ಪ ಶಿವಶರಣ ಮಾತಿನಮಲ್ಲನಲ್ಲ ನೋಡಾ.
ಜನ ಮೆಚ್ಚಿಗೆಗಾಗಿ ಒಣ ಆಡಂಬರವ ಆಡುವನಲ್ಲ ಮಾಡ-ವನಲ್ಲ ನೋಡಾ.
ಜನಮೆಚ್ಚಿ ನಡೆಕೊಂಡರೇನಹುದು? ಮನಮೆಚ್ಚಿ ನಡೆವುದೇ ಚೆಂದವಲ್ತೆ?
ಹೇಳಾ! ಶ್ರೀ ಶೈಲಮಲ್ಲಿಕಾರ್ಜುನ."

**ಮಾನವಜನ್ಮವೇ ಶ್ರೇಷ್ಠ – 9**

"ಅನಂತ ಜೀವಕೋಟಿಯಲ್ಲಿ ಮಾನವನ ಜೀವನ ಅತ್ಯಂತ ಶ್ರೇಷ್ಠ ವಾದದು, ಇವನ ಆ ಮೋಕ್ಷವನ್ನು ಪಡೆಯಲು ಅರ್ಹನಾದಂತೆ ಇನ್ನಾವ ಉಳಿದ ಜೀವಿಗಳಿಗೆ ಯೋಗ್ಯತೆಯಿಲ್ಲ. ಎಲೆ ಮಾನವಾ ಧನ್ಯ! ಧನ್ಯ! ನೀನೇಧನ್ಯ! ಆದರೆ ನೀನು ನಿನ್ನನ್ನು ತಿಳಿವಾಗ ನೀನೇ ಶರಣ! ಮರೆವಾಗ ಈ ಜನನ-ಮರಣಗಳ ದುಃಖಕ್ಕೆ ಕಾರಣ! ಆಮೇಲೆ ತನು ಧಾರಣ! ಇದುವೇ ಆ ಬಂಧ-ಮೋಕ್ಷಗಳ ಉಭಯ ತೆರೆನಾದ ಸೋಪಾನ!" "ಕನ್ನಡ ಕವಿ ಕಾಳಿದಾಸ" ಕೃತ ದಿವ್ಯವಾಣಿ (ವಿಶ್ವಧರ್ಮತತ್ತ್ವ ಬೋಧೆ)

**ಶಿವಾರ್ಪಣಭಾವ** [59]

" ಆತ್ಮನಿಷ್ಠರಾದ ಮಹಾನುಭಾವಿ ಶಿವಶರಣರು ಸದಾಕಾಲ
ಹೇಗಿರ್ದಡೇನದೇ ಶಿವಪೂಜೆ ನೋಡಾ.
ಅದೇ ಶಿವಾರ್ಪಣ, ಅದೇ ಶಿವೈಕ್ಯ ಸಂಪದ ನೋಡಾ.
ಇದಕ್ಕೆ ಬೇರೆಯಾದುದೆಲ್ಲ ಯುಕ್ತಿಯಾದ ಪ್ರಯುಕ್ತ
ಚಿತ್ತ ಭ್ರಾಂತಿಗೆ ಕಾರಣವಾಯಿತ್ತು ನೋಡಾ.
ಎಂದು ಗುರುವಚನದಿಂದರಿತು ಆಚರಿಪರು ಮಹಂತರಿವರು
ಕಾಣಾ, ಶ್ರೀಶೈಲ ಮಲ್ಲಿಕಾರ್ಜುನ '

**ಪರಮ ಪೂಜ್ಯತೆಯ ಲಕ್ಷಣ** [60]

ಈ ದೇಹವು-ಅಸ್ತಿ, ಚರ್ಮ, ರಕ್ತ
ಮಾಂಸಮಯವಾಗಿರ್ಪುದು ಕಂಡಯ್ಯ
ಇದಕ್ಕೆ ಹಸಿವು, ತೃಷೆ, ನಿದ್ರೆಗಳಿರ್ಪುದು ಸಹಜವಯ್ಯ
ಇದನರಿದವರು ಶರೀರ ಗುಣಂಗಳನು ಎಣಿಸಲಾಗದಯ್ಯಾ
ಈ ಹಸಿವು, ನೀರಡಿಕೆ, ನಿದ್ರಾದಿಗಳು
ಭೂಮಿಗೆ ಜನಿಸಿ ಬರ್ಪ ಪ್ರತಿ ಜೀವಿಗಳಿಗುಂಟು। ಬಿಟ್ಟಿಲ್ಲ ಕಂಡಯ್ಯ
ಆದಕಾರಣ ಮಾನವತೆಯ ಹಿರಿಮೆಗೆ
ಈದೇಹ ಧರ್ಮ ಪ್ರಮಾಣವಲ್ಲ ಕಂಡಯ್ಯ
ಆತ್ಮ ಪ್ರತಿಭೆಯಿಂದ ಚೆನ್ನಾಗಿ ಪರಿಶೋಭಿಸುತಿರ್ಪ
ಜ್ಞಾನರತ್ನ ಪ್ರಭೆಯೆ ಪ್ರಮಾಣ ಕಂಡಯ್ಯ.
ಸುಚಿತ್ ಪ್ರಭೆಯುಳ್ಳವರು ಎಂತಿರ್ದೊಡು ಪರಮಪೂಜ್ಯರು
ಕೇಳಾ, ಶ್ರೀಶೈಲ ಮಲ್ಲಿಕಾರ್ಜುನ'

**ಕಾಯಕಧರ್ಮ, ಕಾಯಕದ ಆವಶ್ಯಕತೆ** [61]

" ಕ್ರಿಯೆಯಳಿದ ಭಕ್ತ ಮನುಜ, ಕ್ರಿಯೆಯಳಿದ ಗುರು ಪಶು,
ಕ್ರಿಯೆಯಳಿದ ಜಂಗಮ ರಾಕ್ಷಸ, ಕ್ರಿಯೆಯಳಿದ ಪ್ರಸಾದಿ ಯವನ,
ಕ್ರಿಯೆಯಳಿದ ಶರಣ ಅಜ್ಞಾನಿ, ಕ್ರಿಯೆಯಳಿದ ಲಿಂಗೈಕ್ಯ ಜನನಕ್ಕೊಳಗು ನೋಡಾ
ಶ್ರೀಶೈಲ ಮಲ್ಲಿಕಾರ್ಜುನ "

**ಕಾಯಕವೇ ಕೈಲಾಸ** [62]

" ಗುರುವಾದಡು ಕಾಯಕದಿಂದಲೇ ಮುಕ್ತಿಯಹುದು
ಲಿಂಗವಾದಡು ಕಾಯಕದಿಂದಲೆ ಶಿಲೆಯ ಕುರುಹು ಕಳೆಯುವುದು



ಜಂಗಮವಾದಡು ಕಾಯಕದಿಂದಲೆ ತನ್ನ ಲಾಂಛನದ ಪಾಶ ಹರಿಯುವುದು ನೋಡಾ
ಗುರುವಾದಡು ಚರಸೇವೆ ಮಾಡಬೇಕು,
ಲಿಂಗವಾದಡು ಚರಸೇವೆ ಮಾಡಬೇಕು,
ಜಂಗಮವಾದಡು ಚರಸೇವೆ ಮಾಡಬೇಕು ನೋಡಾ,
ಇಂತೀ ತ್ರಿನೇತ್ರ ಶಂಭುವಾದ ಶರಣ ಲೋಕಕಲ್ಯಾಣಾರ್ಥವಾಗಿ
ಭುವನ ಭಾಗ್ಯದಿಂದವತರಿಸಿ, (ಗುರು-ಲಿಂಗ-ಜಂಗಮ) ತ್ರಿಮೂರ್ತಿತಾನಾಗಿ ಚರಿಸಿ,
ಧಾರ್ಮಿಕಾಭಿವೃದ್ಧಿಗೊಳಿಸಿ ವರಕಾಯಕದ ಮಹಿಮೆಯಿಂ
ಕೈಲಾಸವನಿಳೆಗಿಳಿಸಿ ತಂದ ಮಹಂತನೀತ ನೋಡಾ.
ಅದ್ವಿತೀಯ ಘನಮಹಿಮ ಅನಾದಿ ಶರಣ ನೋಡಾ.
ಇದುಶ್ರೀಶೈಲಮಲ್ಲಿಕಾರ್ಜುನ ಮಹಾಲಿಂಗ ಮೂರ್ತಿಯನಿಜದರಿವು ಕಾಣಿರಯ್ಯಾ !"

---

ವಿಶೇಷ ಟೀಪು : ಆತ್ಮ ಸಂಕಲ್ಪ.

"ನಾನು ಮೃತ್ಯುವಿಗಿಂತ ಶಕ್ತಿಶಾಲಿ ಇರುತ್ತೇನೆ ಹಾಗೂ ನನ್ನ ದೈವಕ್ಕಿಂತ ಶ್ರೇಷ್ಠಳಾಗಿದ್ದೇನೆ ; ನನ್ನ ಪ್ರೇಮವು ಈ ಜಗತ್ತಿನ ನಂತರವೂ ಇರುವುದು. ದುರ್ವಿಧಿಯು ನನ್ನ ಅಮರತ್ವದ ಮುಂದೆ ನಿಲ್ಲಲಶಕ್ಯವಾಗಿ ನಿಸ್ಸಹಾಯಕವಾಗಿ ನನ್ನಿಂದ ಬಿದ್ದು ಹೋಗುವುದು. ವಿಧಿಯ ನಿಯಮವೇ ಬದಲಾಗಬೇಕು ವಿನಃ ನನ್ನ ಆತ್ಮ ಸಂಕಲ್ಪವು ಎಂದೂ ಬದಲಾಗದು "

– ಶ್ರೀ ಅರವಿಂದರ–ಮಹಾಕಾವ್ಯ 'ಸಾವಿತ್ರಿ'

---

ಆತ್ಮಾನುಭವ

ಓ ಸನಾತನ ಯೋಗಪುತ್ರನೇ ಎಲ್ಲವರಲ್ಲಿ ಆತ್ಮವನ್ನು ಕಾಣು. ಹೆದರದಿರು. ನಿಜವಾಗಿಯೂ ನೀನೇನಿರುವೆಯೋ ಅದೇ ನೀನಾಗಲು ಯಾವುದಕ್ಕೂ ನಿನ್ನ ಪಾತ್ರವನ್ನು ಶಕ್ತಿ ಹಾಗೂ ಧೈರ್ಯದಿಂದ ನಿರ್ವಹಿಸು - ನಿನ್ನ ಸೋಲಿನಲ್ಲೂ ದೇವರಿದ್ದಾನೆ, ನಿನ್ನ ಗೆಲುವಿನಲ್ಲೂ ದೇವರಿದ್ದಾನೆ ........ ಭಗವಂತನು ಯಾವುದಕ್ಕಾದಾದರೂ ಹೆದರುವದುಂಟೆ ? ಛೇ, ಎಂದೂ ಇಲ್ಲ ........... ಸರ್ವ ಪ್ರಾಣಿಗಳಲ್ಲಿ ಆತ್ಮವನ್ನು ಅನುಭವಕ್ಕೆ ತಂದುಕೋ, ಆತ್ಮನಲ್ಲೇ ಸರ್ವ ಪ್ರಾಣಿಗಳನ್ನು ಕಾಣು ......... ಅಂದಾಗ ಅಂತಿಮವಾಗಿ ಭಯವು ನಿನ್ನಿಂದ ಭಯಗೊಂಡು ದೂರ ಓಡುವದು ! ನಿನ್ನ ಸ್ಪರ್ಶದಿಂದ ಎಲ್ಲ ತಾನೇ ಚಿತ್ರಹಿಂಸೆಗೊಂಡೇನೆಂದು ನೋವು ನಿನ್ನನ್ನು ಸ್ಪರ್ಶಿಸದು !! ಎಲ್ಲಿ ತಾನೇ ಸಾಯುವೆನೆಂಬ ಭಯದಿಂದ ಮೃತ್ಯುವು ನಿನ್ನ ಬಳಿಸುಳಿಯಲು ಕೂಡ ಧೈರ್ಯವಹಿಸದು !!! ............ ನೋಡಿಲ್ಲಿ ಯೋಗಪುತ್ರನೇ ಇನ್ನೂ ಸಹಿತ ಸಂಶಯಗಾರನಾಗಬೇಡ. ಹೆದರಿ ನಡುಗುವವನಾಗ ಬೇಡ. ಯಾಕೆಂದರೆ ನಿನ್ನ ಈ ತೋರಿಕೆಯ ದೇಹದಲ್ಲೇ ಕೇವಲ ತನ್ನೊಂದು ಉಸಿರಿನಿಂದಲೇ ಜಗತ್ತುಗಳನ್ನು ಸೃಷ್ಟಿಸಬಲ್ಲ ಹಾಗೂ ಧ್ವಂಸಗೆಯ್ಯ ಬಲ್ಲ ಭಗವಂತನೇ ಇದ್ದಾನೆ.

---

(ಈಶ ಉಪನಿಷತ್) ಶ್ರೀ ಅರವಿಂದರು

### ಪವಿತ್ರ ಕಾಯಕ [63]

"ಅತಿಯಾಶೆಯನಳಿದು, ಮಿತಧನ ಪಡೆದು,
ಸಂಗ್ರಹದ ದುರ್ಭಾವನೆ ತೊರೆದು, ಸಮಾಜ ಹಿತಗೆಯ್ದು,
ಸತ್ಯನುಡಿ ನುಡಿದು, ಲಿಂಗ ನಡೆ ನಡೆದು,
ಶಿವಾಚಾರ ಪಥವಿಡಿದು, ಹೆರರಿಗಾನಂದವ ಸುರಿದು,
ತ್ರಿವಿಧ ಭಕ್ತಿದಳೆದು, ತ್ರಿವಿಧ ದಾಸೋಹಗೆಯ್ದು,
ನಿತ್ಯ ಜ್ಞಾನಪ್ರಸಾದ ಪಡೆದು, ಶಿವಾನಂದ ತೃಪ್ತಿವಡೆದು,
ಸೃಷ್ಟಿಯೊಳ್‌ನಿಂದು ವಿಶ್ವಾತ್ಮಕಲ್ಯಾಣಿಯೆನಿಸಿರ್ದ
ಶಿವಶರಣ ನಿತ್ಯಮಾಳ್ಪಪವಿತ್ರ ಕಾಯಕ ಮಹಿಮೆ
ಘನ ಮಹಿಮೆಕಾಣಾ ! ಶ್ರೀಶೈಲಮಲ್ಲಿಕಾರ್ಜುನ. "

### ವಿಷಯ ವ್ಯಾಮೋಹ [64]

"ವಿಷಯಕ್ಕೊಳಗಾದ ಭಸ್ಮಾಸುರ ಭಸ್ಮವಾದ.
ವಿಷಯಕ್ಕೊಳಗಾದ ಚಂದ್ರ ಗುರುಪತ್ನಿಯ ಬಯಸಿ ಕಲಂಕಿತನಾದ.
ವಿಷಯಕ್ಕೊಳಗಾದ ರಾವಣ ಸೀತೆಯನು ಕದ್ದೊಯ್ದು ಹತನಾದ.
ವಿಷಯಕ್ಕೊಳಗಾದ ಕೀಚಕ ಸೈರಂಧ್ರಿಗಾಗಿ ಮೃತನಾದ.
ಇಂತು ಭುವನತ್ರಯದೊಳು ವಿಷಯಕ್ಕೊಳಗಾದವರೆಲ್ಲ ನಾಶವಾದರು,
ಕೇಳಾ, ಶ್ರೀಶೈಲಮಲ್ಲಿಕಾರ್ಜುನ "

### ಕಾಲ ಕಾಮರ ಸೋಲು [65]

ಶ. ಷ.॥ ಕಾಲನ ಬಾಧೆಗೆ ।
ಸೋಲದ ಅಮರನೆ ।
ಲೀಲೆಯ ಮಹಿಮೆಯ ಮೆರೆವನು ತಾ ॥
ಕೇಳಿಯ ಕಾಮನ ।
ಶೂಲಕೆ ಸಿಲುಕಿಸಿ
ಮೇಲಿನ ಮನೆಯೊಳು ವಾಸಿಸುವವ್ ॥5॥



' ಲಿಂಗಭೋಗೋಪ ಭೋಗಿಯಾಗಿಪ್ಪ ಶರಣ
ಶಿವಧರ್ಮ ಶಿವಜ್ಞಾನ ಶಿವಾಚಾರ ಶಿವಾನುಭವ ಸಂಪನ್ನನಾಗಿರ್ದು
ಲಿಂಗದಾಣತಿಯಿಂದ ಬಂದಿರ್ದ ಪಂಚೇಂದ್ರಿಯಂಗಳ
ವ್ಯವಹಾರವನೆಲ್ಲ ಲಿಂಗಕ್ಕರ್ಪಿಸಿ ಲಿಂಗಮುಖವಾಗಿ
ಸೇವಿಸುತಿರ್ಪನಾಗಿ ಕಾಲ ಕಾಮರನು ಸೋಲಿಸಿ
ಪರಮ ಸುಖಶಾಂತಿ ಸಾಗರದೊಳೋಲಾಡಿ
ನಿತ್ಯ ನಿಜಾನಂದ ಸಾಮ್ರಾಜ್ಯದೊಳಿರ್ದು ನಲಿದೊಲಿದು
ಸಹಜ ಸದ್‌ಭಕ್ತಿ ಲೀಲಾಲೋಲನಾಗಿ ದಯಾಶೀಲನಾಗಿ
ಮೆರೆಯುತಿರ್ದನು ಕಾಣಾ ಶ್ರೀಶೈಲ ಮಲ್ಲಿಕಾರ್ಜುನ! "

---

ಟಿಪ್ಪಣಿ; ಪಂಚೇಂದ್ರಿಯಗಳು; ಕಣ್ಣು, ಕಿವಿ, ಮೂಗು, ನಾಲಿಗೆ, ತ್ವಚ (ಇವು ಪಂಚೇಂದ್ರಿಯಗಳು)
ಗುದ, ಗುಹ್ಯ, ಪದ, ಪಾಣಿ, ವಾಕ್ (ಇವು ಪಂಚಕರ್ಮೇಂದ್ರಿಯಗಳು)

---

ವಿಶೇಷ ಟೀಪು : ೧೪ ಹಿಂದಿನ ಜನ್ಮದಲ್ಲಿ ಅಪರಾಧಿ

'ಒಮ್ಮೆ ಪ್ರಸಿದ್ಧ ವ್ಯಕ್ತಿಯೊಬ್ಬನು ಕೊಲೆಯ ಅಪರಾಧದಲ್ಲಿ ಸಿಕ್ಕುಬಿದ್ದಿದ್ದನು. ಮರಣ ದಂಡನೆ ಭಯವೂ ಇತ್ತು. ಆತ ನಿರಾಪರಾಧಿಯೆಂದು ಆತನ ಮೇಲೆ ಕೊಲೆಯ ಆರೋಪ ಹೊರಿಸಿದ್ದಾರೆಂದೂ ಆತನ ಅಪ್ಪರು ಆಣೆಮಾಡಿ ಹೇಳುತ್ತಿದ್ದರು. ಅವರು ಆತನ ಭಾವಚಿತ್ರವನ್ನು ಮಾತೆಗೆ ಕಳಿಸಿ ಸಹಾಯವನ್ನು ಕೋರಿದ್ದರು. ಆತನ ಭಾವಚಿತ್ರವನ್ನು ನೋಡಿ ಆತ ನಿಜವಾಗಿ ನಿರಪರಾಧಿಯೆಂದೂ ಆದರೆ ಹಿಂದಿನ ಜನ್ಮದಲ್ಲಿ ಆತ ಕೊಲೆಮಾಡಿದ್ದನೆಂದೂ ಮಾತೆ ಹೇಳಿದರು.'

---

ಶ್ರೀ ಮಾತೆಯವರು ಶ್ರೀ ಅರವಿಂದಾಶ್ರಮ 'ದಿವ್ಯ ಸತ್ತ್ವದ ಮಿಂಚು' ಕೃತಿರತ್ನ.

---

### ಆಜೀವ ಸದಸ್ಯರುಗಳಲ್ಲಿ ಒಂದು ಮನವಿ.

ಸಿದ್ಧಗಂಗಾ ಪತ್ರಿಕೆಯ ಅನೇಕ ಆಜೀವ ಸದಸ್ಯರುಗಳ ವಿಳಾಸಗಳು ಬದಲಾಗಿರುವುದರಿಂದ ಕಾರ್ಯಾಲಯದಿಂದ ಕಳುಹಿಸಿದ ಸಂಚಿಕೆಗಳು ಕೆಲವು ಸದಸ್ಯರುಗಳಿಗೆ ತಲುಪದೆ ಹಿಂತಿರುಗುತ್ತಿವೆ. ದಯವಿಟ್ಟು ನಿಮ್ಮಬದಲಾದ ವಿಳಾಸಗಳನ್ನು ಆಗಿಂದಾಗ್ಗೆ ಪತ್ರಿಕಾ ಕಾರ್ಯಾಲಯಕ್ಕೆ ಕಳುಹಿಸಿ ಕೊಡುವುದರಮುಖೇನ "ಸಿದ್ಧಗಂಗಾ" ನಿಮಗೆ ಕ್ರಮವಾಗಿ ತಲುಪಲು ಸಹಕರಿಸಬೇಕಾಗಿ ಪ್ರಾರ್ಥನೆ. ತಮ್ಮ ಸದಸ್ಯತ್ವದ ನಂಬರನು ಬರೆಯಿರಿ.

## ಅಪ್‌ಟು ಡೇಟ್ ಗಣೇಶ

ಶ್ರೀ ಎಲ್. ಆರ್. ಹೆಗಡೆ, ಸಿದ್ದಾಪುರ, ಉತ್ತರ ಕನ್ನಡ ಜಿಲ್ಲೆ.

ವಿಜ್ಞಾನದ ಹೊಸ ಹೊಸ ಶೋಧಗಳ, ಮಾನವನ ಹೊಸ ಹೊಸ ಸಾಹಸಗಳ ರಾಕೆಟ್ ಯುಗದಲ್ಲಿ ಜೀವನ ಕ್ರಮವು ದಿನ ದಿನಕ್ಕೆ ಹೊಸರೂಪ ಪಡೆಯುತ್ತಿದೆ. ನಾಳೆ ಬರುವಷ್ಟರಲ್ಲಿಯೇ ಇಂದು ಹಳೆಯದಾಗಿರುತ್ತದೆ.

ನಾಳೆಯಾದರೋ? "ನಾಳೆಯೆಂಬೆಯೊ? ನಾಳೆ ಸೇರುವೆನು ನೂರ್ಕೋಟಿ ನಿನ್ನೆಗಳ ಜತೆಗೆ" ಎಂದು "ಉಮರನ ಒಸಗೆ" ಯನ್ನು ಕನ್ನಡಕ್ಕೆ ಬೀರಿದ ಡಿ ವಿ ಜಿ ಯವರ ಉಮರ್ ಖಯ್ಯಾಂ ಹೇಳಿಲ್ಲವೆ?

ಹೊಸ ಹೊಸ ಚಲಚ್ಚಿತ್ರಗಳ (ಯುವಕರ ರೂಢಿಯ ಮಾತಿನಂತೆ ಪಿಕ್ಚರ್‌ಗಳ) ಪ್ರೀಮಿಯರ್ ಶೋಗಳನ್ನು ದಿನಕ್ಕೆ ಮೂರು ಸಲ ನೋಡಿ, ತಮ್ಮ ಫ್ಯಾಶನ್‌ಗಳನ್ನು ಮಾರ್ಪಡಿಸಿಕೊಳ್ಳುವ ಅಪ್‌ಟು ಡೇಟ್ ಅಮ್ಮಯ್ಯಗಳ, ಹಾಗೂ ತಮ್ಮಯ್ಯಗಳ ಮತ್ತು ತಂಗಮ್ಮಗಳ ವಿಷಯವಾಗಿ ಭಾಷಣ ಮಾಡುವಾಗಲೂ ಅಪ್‌ಟು ಡೇಟ್ ಆಗುವುದು ಕಷ್ಟ. ಹೀಗಿರುವಾಗ ಪುರಾತನನೂ ಸನಾತನನೂ ಆದ ಗಣಪತಿಯನ್ನು ಅಪ್‌ಟು ಡೇಟ್ ಮಾಡುವದಾಗಲಿ ಅವನ ಕುರಿತು ಲೇಖನ ಬರೆವುದಾಗಲಿ ಎಷ್ಟು ಕಷ್ಟ ಎಂಬುದನ್ನು ಅಪ್‌ಟು ಡೇಟ್ ಮಂದಿಯೇ ವಿಚಾರಿಸಿಕೊಳ್ಳಬೇಕು.

ಅಂತೂ ಗಣಪತಿಯನ್ನು ಈ ಶತಮಾನದ ಫ್ಯಾಶನ್ ಯುಗಕ್ಕೆ ಹೊಂದಿಸಿಕೊಳ್ಳಲು ನಮ್ಮ ರಸಿಕರು ಪ್ರಯತ್ನಗಳನ್ನು ಯಶಸ್ವಿಯಾಗಿಯೇ ಮಾಡಿದ್ದಾರೆ.

ಕಲೆಗಾರರ ಈ ಸೃಷ್ಟಿಯಲ್ಲಿ ಚಡ್ಡಿ, ಬೂಟು, ಹ್ಯಾಟು, ಹಾಕಿಕೊಂಡು ಒಂದು ಕೈಯಲ್ಲಿ ಸಿಗರೇಟ್, ಇನ್ನೊಂದು ಕೈಯಲ್ಲಿ ವಾಕಿಂಗ್ ಸ್ಟಿಕ್ (ನಡೆವ ಬಡಿಗೆಯೆಂದು ಅನುವಾದಿಸಿದರೆ ಹೊಂದಿಕೊಳ್ಳದಲ್ಲ) ಹಿಡಿದ ಗಣಪತಿ ಇದ್ದಾನೆ. ಇನ್ನೊಬ್ಬ ಗಣಪತಿ ದಲ್ಲಿ ಬಂಡಿ (ಕಾನಲಿ) ಟೊಪ್ಪಿಗೆ ಎಂದು ಹಿಂದಣ ಕಾಲದ ಜನರು ಹೇಳುತ್ತಿದ್ದರು ಬೊಕ್ಕತಲೆ ಬಿಟ್ಟುಕೊಂಡು ಕೈಯಲ್ಲಿ ಹ್ಯಾಟ್ ಹಿಡಿದುಕೊಳ್ಳುತ್ತಾನೆ. ಹ್ಯಾಟಿಗೆ ಕನ್ನಡ ಆದರೆ, ಅದು ಈಗ ಹಳೇ ಶಬ್ದವಾಯಿತು.

ಕನ್ನಡಕವನ್ನು, ಅದರಲ್ಲಿಯೂ ಕಪ್ಪುಕನ್ನಡಕ ಹಾಕಿಕೊಳ್ಳುವದು ದೃಷ್ಟಿಗೆ ಬೀಳುತ್ತದೆ. ಫೆಜ್‌ಕ್ಯಾಪ್, ಹಾಗೂ ಶರ್ವಾನಿಗಳನ್ನು ಧರಿಸುವ ಗಣಪತಿಯನ್ನು ಅಪೂರ್ವಕ್ಕಾಗಿಯಾದರೂ ನೋಡಿದ್ದುಂಟು, ಕೈಯ್ಯಲ್ಲಿ ಬಂದೂಕವನ್ನು ಹಿಡಿದಿದ್ದನು ಒಬ್ಬ ಗಣಪತಿ.



ಕೈಯ್ಯಲ್ಲಿ ರಾಕೆಟ್ (ಕ್ಷಿಪಣಿ) ಹಿಡಿದ ಗಣಪತಿಯನ್ನು ಕಂಡರೆ ಆಶ್ಚರ್ಯವಾಗ ಬೇಕಿಲ್ಲ. ಮೊದಲ ಪೂಜೆಗೊಳ್ಳುವ ಮನ್ನಣೆ ಪಡೆದಿರುವ ಈತನು ಕ್ಷಿಪಣಿಯನ್ನು ಮೊಟ್ಟಮೊದಲಿಗೆ ಯಶಸ್ವಿಯಾಗಿ ಪ್ರಯೋಗಿಸಿದವನೆಂಬುದು ಹಲವರಿಗೆ ತಿಳಿದಿರಲಿಕ್ಕಿಲ್ಲ ಕೈಯಲ್ಲಿ ತ್ರಿಶೂಲ, ಪರಶುಗಳನ್ನು ಹಿಡಿವ ಮೊದಲೇ ಆತನು ತನ್ನ ಬಾಲ್ಯದಲ್ಲಿಯೇ ತಾನು ಎಡವಿ ಬಿದ್ದ ಸಮಯದಲ್ಲಿ ನಕ್ಕ ಚಂದ್ರನ ಮೇಲೆ ನಿರ್ದೇಶಿತ ಕ್ಷಿಪಣಿಯನ್ನು ಪ್ರಯೋಗಿಸಿದ್ದನು. ಅದನ್ನು ಪುರಾಣಕಥೆಯಲ್ಲಿ ತನ್ನ ಒಂದು ಹಲ್ಲನ್ನು ಮುರಿದು ಆ ತುಂಡನ್ನು ಚಂದ್ರನ ಮೇಲೆ ಪ್ರಯೋಗಮಾಡಿದ್ದನೆಂದು ಮಾರ್ಪಡಿಸಿರುವುದು ಕಾಣುತ್ತದೆ. ಈತ ಹೀಗೆ ಹಲ್ಲುಮುರಕ (ಹಲ್ಲುಮುಕ್ಕ) ನೆಂದು ತೋರಿಸುವ ಇಚ್ಛೆ ಯಿಲ್ಲದವರು ಆತನ ಎರಡು ಮುಂಬಲ್ಲುಗಳನ್ನು ಪೂರ್ತಿಯಾಗಿಯೆ ಇಡಿಯಾಗಿಯೇ ಇಟ್ಟಿರಬಹುದು.

ಸಂಗೀತ ಪ್ರೇಮಿಗಳು ಆತನು ಪಿಟೀಲನ್ನು ಹಿಡಿದು ಅದನ್ನು ನುಡಿಸುವಂತೆ (ಮೌನ ಸಂಗೀತದಲ್ಲಿ) ನಿರ್ಮಿಸಿರುತ್ತಾರೆ. ಒಬ್ಬ ಗಣಪತಿ ಕೊಳಲನ್ನೂದಿದರೆ ಇನ್ನೊಬ್ಬನು ಡೊಳ್ಳನ್ನು (ತನ್ನ ಡೊಳ್ಳನ್ನಲ್ಲ) ಬಡಿಯುತ್ತಾನೆ. ಸಣ್ಣ ಮಕ್ಕಳು ಊದುವಂತೆ ಸಾರಂಗವನ್ನು ಊದುವುದಕ್ಕೆ ಬಾಯಿಗೆ ಹಿಡಿದ ಗಣಪತಿಯನ್ನು ನೋಡಿದ್ದೆನು. ಒಬ್ಬ ಗಣಪತಿಮೂರ್ತಿಯು ತನ್ನ ಕುತ್ತಿಗೆಗೆ ತೂಗ ಹಾಕಿ ಕೊಂಡ ಪಿಯಾನನ್ನು ತನ್ನ ಡೊಳ್ಳಿಗೇ ಆಧಾರಮಾಡಿಕೊಂಡು ಬೆರಳುಗಳಿಂದ ಬಾರಿಸುತ್ತಾನೆ.

---

೧. 'ಹರಚರಿತ ಚಿಂತಾಮಣಿ' ಎಂಬ ಗ್ರಂಥದಲ್ಲಿ ಗಣೇಶನಿಗೂ ಕುಮಾರಸ್ವಾಮಿಗೂ (ಅಂದರೆ ಷಣ್ಮುಖನಿಗೂ) ಸ್ಪರ್ಧೆ ಬಂದಕಾಲದಲ್ಲಿ ಗಣೇಶನ ಹಲ್ಲು ಮುರಿದುದು ಎಂದು ಉಂಟು ಎಂದು ಡಾ|| ಕೆ ಕೃಷ್ಣಮೂರ್ತಿಯವರ ಲೇಖನದಲ್ಲಿದೆ. (ವಿಶ್ವವ್ಯಾಪೀ ಗಣೇಶನ ಗ್ರಂಥ)

---

ನೆಪಕ್ಕೆ ಮಾತ್ರ ಸಂಪ್ರದಾಯ ಪಾಲಿಸಲು ಸಣ್ಣ ಇಲಿಯೊಂದನ್ನು ಗಣಪತಿಯ ಬಳಿ ಇಟ್ಟಿರುತ್ತಾರೆ. ಆದರೆ, ಗಣಪತಿ ಪಾದದ ಮೇಲೆ ಸಹ ಇಲಿಯನ್ನು ಇಟ್ಟ ಮೂರ್ತಿಯನ್ನು ಮಾಡಿರುವದುಂಟು. ಇಲಿಯು ಗಣಪತಿಯ ವಾಹನವಾಗಿರವುದು ಹಳೇ ಗೊಡ್ಡು ಸಂಪ್ರದಾಯವೆಂದು ತಿಳಿದು ಆಧುನಿಕ ಫ್ಯಾಶನ್‌ಪ್ರಿಯರ್ ಸೈಕಲ್ ಮೇಲೆ ಹತ್ತಿ ಕುಳಿತ ಗಣಪತಿ ಮೂರ್ತಿಯನ್ನು ಮಾಡಿಸಿದರು. ಮೋಟರ್ ಕಾರ್ ನಡೆಸಲು ಕುಳಿತ ಗಣಪತಿಯನ್ನು ಹಲವರು ನೋಡಿರಬಹುದು. ಹೆಲಿಕಾಪ್ಟರ್ ಮೇಲೆ ಕುಳಿತ ಗಣಪತಿಯನ್ನು ನಿರ್ಮಿಸಿದುದನ್ನು ನೋಡಿದವರಿರಬಹುದು.

ಶ್ರೀ ಗೋವರ್ಧನ ಅಂಕೋಲೆಕರರ "ವಿಶ್ವವ್ಯಾಪಿ ಗಣೇಶ" ಗ್ರಂಥವನ್ನು ನೋಡಿದವರು ಇತರ ದೇಶಗಳಲ್ಲಿ ಸೊಂಡಿಲೇ ಇಲ್ಲದ ಗಣಪತಿಯ ಮೂರ್ತಿಗಳಿರವುದನ್ನು ತಿಳಿದಿರುತ್ತಾರೆ. ಆದರೆ, ನಮ್ಮ ದೇಶದಲ್ಲಿ ಎಷ್ಟೇ ಫ್ಯಾಶನ್‌ಗಳು ಬದಲಾದರೂ ಸೊಂಡಿಲು ಇಲ್ಲದ ಗಣಪತಿಯನ್ನು ಪೂಜೆಯಲ್ಲಿ ಕುಳ್ಳಿರಿಸಿಕೊಳ್ಳುವುದು ಸಾಧ್ಯವಿಲ್ಲ.

"God made Man in his own image" 'ದೇವರು ಮನುಷ್ಯನನ್ನ ತನ್ನ ಬಿಂಬದಂತೆಯೇ, ತನ್ನರೂಪಿನಂತೆಯೇ ನಿರ್ಮಿಸಿದನು" ಎಂದು ಬೈಬಲ್‌ನಲ್ಲಿ ತಿಳಿಸಲಾಗಿದೆ.

ಆದರೆ, ಈ ಗಣಪತಿ ಮೂರ್ತಿಗಳ ವೈವಿಧ್ಯವನ್ನು ನೋಡಿದರೆ, ಬೆಳಗಾವಿ ಲಿಂಗರಾಜ ಕಾಲೇಜಿನಲ್ಲಿ ನಾನು ವಿದ್ಯಾರ್ಥಿಯಾಗಿದ್ದಾಗ ವಕೀಲ್ ಎಂಬವರು "Man made God in his own image" ಎಂಬ ವಿಷಯದ ಮೇಲೆ ಬಹಳ ಸ್ವಾರಸ್ಯವಾಗಿ ಭಾಷಣ ಮಾಡಿದ್ದು ನೆನಪಾಗುತ್ತದೆ. ಮಾನವನು ತನ್ನ ಹಾಗೆಯೇ ದೇವರನ್ನು ಕಲ್ಪಿಸಿ ದೇವತೆಗಳಲ್ಲಿ ಮಾನವ ಸ್ವಭಾವವನ್ನು ಆರೋಪಿಸಿದನು. ತನ್ನ ದೌರ್ಬಲ್ಯಗಳನ್ನು ದೇವತೆಗಳಲ್ಲಿ ಕಂಡು ಪುರಾಣ ಕಥೆಗಳನ್ನು ಸೃಷ್ಟಿಸಿದನು, ತನ್ನಂತೆಯೇ ಅವರಿಗೂ ಹೆಂಡರು ಮಕ್ಕಳು ಇರುವರೆಂದು ಸಂಬಂಧಗಳ ಜೋಡಣೆ ಮಾಡಿದನು. ತನ್ನಂತೆಯೇ ಅವರೂ ಸಹ ಕಷ್ಟ - ನಷ್ಟಗಳಲ್ಲಿ ತೊಳಲಾಡುವರೆಂದು ಕಥೆಗಳನ್ನು ಕಟ್ಟಿ ಸಮಾಧಾನ ತಂದುಕೊಂಡನು.

ತಾನು ಮರಣಕ್ಕೆ ಗುರಿಯಾಗುವವನಾದರೂ ದೇವತೆಗಳು ಅಮರರಾಗಿರುವರೆಂದು ತಿಳಿದು ಆ ಅಮರತ್ವವನ್ನ ತಾನೂ ಪಡೆಯಬೇಕೆಂಬ ಹವಣಿಕೆಯಲ್ಲಿ ಆಯುಷ್ಯವನ್ನು ಸವೆಸಿದನು.

ಕ್ರಿಕೆಟ್ ಪ್ರೇಮಿಗಳು ಬ್ಯಾಟ್ ಹಿಡಿದುಕೊಂಡಿರುವ ಗಣಪತಿಯ ಮೂರ್ತಿಯನ್ನು ನೋಡಲು ಇಷ್ಟಪಡಬಹುದು. ದೃಷ್ಟಿಯಂತೆ ಸೃಷ್ಟಿ, ಭಾವದಂತೆ ದೇವ. ಅದಕ್ಕೆ ತಕ್ಕಂತೆಯೇ ಈ ದೇವರ ಮೂರ್ತಿಗಳ ಸೃಷ್ಟಿಯೂ ಆಗುತ್ತದೆ.

ಆನೆಯು ಪ್ರಾಣಿಗಳಲ್ಲಿ ಅತಿ ಬುದ್ಧಿವಂತಪ್ರಾಣಿಯಾಗಿದೆ. ಗಣಪತಿಯ ಆನೆಮೊಗವು ಗಣಪತಿಯ ಬುದ್ಧಿಶಕ್ತಿಯ ಪ್ರತೀಕವಾಗಿದೆಯೆಂದು ಹೇಳುತ್ತಾರೆ, ಹಾಗಿದ್ದರೆ ಕೆಲವುದೇಶಗಳಲ್ಲಿ ಗಣಪತಿಗೆ ಮೂರು ಸೊಂಡಿಲು, ಐದು ಸೊಂಡಿಲುಗಳನ್ನೂ ಜೋಡಿಸುವ ಕ್ರಮವು ಆ ಬುದ್ಧಿಶಕ್ತಿಯ ವೃದ್ಧಿಯನ್ನು ಸೂಚಿಸಬಹುದು.

ಅದರಂತೆಯೇ ಗಣಪತಿಯು ತಿನ್ನುವ ಬಗೆಬಗೆಯ ಸಿಹಿಖಾದ್ಯ ಪರಿಣಾಮವಾಗಿ ಅವನ ಹೊಟ್ಟೆಯು ಬಲು ದೊಡ್ಡದಾಗಿರುವದು ಹಿಂದಣ ಕಾಲದಲ್ಲಿನ ಆಹಾರ ಸಮೃದ್ಧಿಯನ್ನು ಸೂಚಿಸಹುದು.



ಗಜಾನನಂ ಭೂತಗಣಾಧಿಸೇವಿತಂ ।
ಕಪಿತ್ಥಜಂಬೂಫಲ ಸಾರಭಕ್ಷಿತಂ ॥
ಉಮಾಸುತಂ ಶೋಕವಿನಾಶಕಾರಣಂ ।
ನಮಾಮಿ-ವಿಘ್ನೇಶ್ವರ ಪಾದಪಂಕಜಂ ॥

ಎಂಬ ಸ್ತೋತ್ರ ಶ್ಲೋಕದಲ್ಲಿ ಬರುವ ಕಪಿತ್ಥ ಅಂದರೆ ಬೆಳವಲದ ಹಣ್ಣನ್ನೂ ಜಂಬೂಫಲ ಅಂದರೆ ನೇರಿಲಿಹಣ್ಣುಗಳನ್ನೂ ಸೇವನೆ ಮಾಡುವ ಗಣಪತಿಯು ಮಧು ಮೇಹರೋಗದಲ್ಲಿ ಗುಣಕಾರಿಯಾಗಿರುವ ಹಣ್ಣುಗಳನ್ನು ಯಾಕೆ ಹೆಚ್ಚಾಗಿ ಅಪೇಕ್ಷಿಸುತ್ತಾನೆ ಎಂಬ ಕುರಿತು ನನ್ನ ಮಿತ್ರರಾದ ಆಯುರ್ವೇದ ಚಿಕಿತ್ಸಕರೊಬ್ಬರು ವಿಚಾರ ಮಾಡಿದ್ದಾರೆ. ಬಹಳ ಬೊಜ್ಜನ್ನುಂಟುಮಾಡುವ ಕಜ್ಜಾಯಗಳನ್ನು ತಿಂದ ಪರಿಣಾಮವಾಗಿ ಮಧುಮೇಹರೋಗ ಬರಬಾರದೆಂದು ಈ ಹಣ್ಣುಗಳನ್ನು ತಿನ್ನಲು ಈರೀತಿ ಸೂಚನೆಯನ್ನು ಗಣಪತಿಗೆ ಕೊಡುತ್ತಿರುವನೆಂಬುದು ಅವರ ತರ್ಕವಾಗಿದೆ.

ಗಣಪತಿಯ ಮೂಗೇ ಉದ್ದವಾಗಿ ಹೊಟ್ಟೆಯವರೆಗೆ ಬಂದರೂ ಹೊಟ್ಟೆಯೂ ದೊಡ್ಡದಾಗಿ ಮೂಗಿನ ವರೆಗೆ ಬಂದಿದೆ ಎಂದೂ ಹೇಳಬಹುದಾಗಿತ್ತು. ಆದರೆ ರೇಶನ್ ಯುಗದ ಪರಿಣಾಮವಾಗಿ ಮತ್ತು ಎರಡನೇ ಮಹಾಯುದ್ಧ ಕಾಲದ ಹಾಗೂ ಅನಂತರದ ಗಣಪತಿಯ ಹೊಟ್ಟೆ ಮೊದಲಿನಷ್ಟು ದೊಡ್ಡದಿರುವುದಿಲ್ಲ. ಜನರ ಫ್ಯಾಶನ್ ಪ್ರಕಾರವಾಗಿಯೂ ಸೌಂದರ್ಯದೃಷ್ಟಿಯಿಂದಲೂ ಆಹಾರಸಾಮಗ್ರಿಗಳ ಕೊರತೆಯಿಂದಲೂ ಗಣಪತಿಯ ಹೊಟ್ಟೆಯು ತಳ್ಳಗಾಗುವ ಯೋಗ ಬಂದಿದೆ. ಕೈಕಾಲುಗಳು ಮೊದಲಿನಂತೆ ಬೊಜ್ಜು ಬೆಳೆದು ಗಡುತರವಾಗಿರುವಂತೆ ಕಾಣುವುದಿಲ್ಲ.

ತಂಜಾವೂರು ದೇವಾಲಯದಲ್ಲಿ ನರ್ತಿಸುವ ಗಣಪತಿಯ ಮೂರ್ತಿಇರುವುದಂತೆ ಈಗಿನ ಗಣಪತಿಯ ಮೈಕಟ್ಟು ನರ್ತನಮಾಡಲು ಅನುಕೂಲಕರವಾಗಿರುತ್ತದೆ.

ಗಣಪತಿಗೆ ಇಲಿಯು ವಾಹನವಾದ ಕುರಿತು ಒಂದು ಕಥೆಯಿದೆ. ಗಣೇಶನು ಒಮ್ಮೆ ಗಜಮುಖ ರಾಕ್ಷಸನೊಡನೆ ಯುದ್ಧಮಾಡಿದನಂತೆ, ರಾಕ್ಷಸನು ಅವನ ಬಲದಂತವನ್ನು ಮುರಿದನಂತೆ. ಮುರಿದ ಕೋರೆಯಿಂದಲೇ ಗಣಪನು ದೈತ್ಯನ ಮೇಲೆರಗಿದನಂತೆ. ಆಗ ಆತನು ಇಲಿಯ ರೂಪದಿಂದ ಓಡಿಹೋದನಂತೆ. ಅದೇ ಇಲಿಯನ್ನು ಹಿಡಿದು ತನ್ನ ರೂಪಕ್ಕೆ ಪ್ರತಿಸ್ಪರ್ಧಿಯಾದ ರಕ್ಕಸನ ಮೇಲೆ ತನ್ನ ಬ್ರಹ್ಮಾಂಡ ಹೊಟ್ಟೆಯ ಭಾರವನ್ನು ಶಿಕ್ಷೆಯ ರೂಪದಲ್ಲಿ ಹೇರಿ, ವಾಹನವನ್ನಾಗಿ ಮಾಡಿಕೊಂಡನಂತೆ. ಪರಶುರಾಮನೊಡನೆ ಯುದ್ಧ ಮಾಡುವಾಗ, ಪರಶುರಾಮನು ಇವನ ದಂತವನ್ನು ತನ್ನ ಕೊಡಲಿಯಿಂದ ಕಡಿದನೆಂದೂ ಕಥೆಯಿದೆ.

ಭಾರತದ ಗಣರಾಷ್ಟ್ರವಂತೂ ಚೀನಾ ಗಜಮುಖ ರಾಕ್ಷಸನೊಡನೆ ಹಿಂದೀ ಚೀನೀ ಭಾಯಿ ಭಾಯಿ ಎಂದು ಹೇಳುತ್ತಾ ಗೋಮುಖ ವ್ಯಾಘ್ರದಂತೆ ವಂಚಿಸಿದ್ದು ನಿಜ) ಯುದ್ಧಮಾಡುವಾಗ ಒಂದು ಹಲ್ಲನ್ನು ಮುರಿದು ಕೊಂಡಿದ್ದಂತೂ ನಿಜ

ಗಣಪತಿಯು ಬ್ರಹ್ಮಚಾರಿಯೆಂದು ತಿಳಿಯಲಾಗುತ್ತಿದ್ದರೂ ಕೆಲವು ಕಥೆಗಳಲ್ಲಿ ಆತನು ಸಿದ್ಧಿ-ಬುದ್ಧಿ ಈ ಇಬ್ಬರು ಕನ್ಯೆಯರನ್ನು ವಿವಾಹವಾಗುತ್ತಾನೆ.

ಗಣೇಶ-ಸ್ಕಂದ (ಸ್ಕಂದ ಎಂಬುದು ಷಣ್ಮುಖನ ಇನ್ನೊಂದು ಹೆಸರು) ಸಮಾನ ವಯಸ್ಕರು ಯಾರಿಗೆ ಮೊದಲು ಮದುವೆ ಮಾಡಬೇಕೆಂಬ ಸಮಸ್ಯೆಯಾಗತ್ತದೆ. ಪೃಥ್ವಿಯನ್ನು ಯಾರು ಏಳುಸಾರಿ ಪ್ರದಕ್ಷಿಣೆ ಮಾಡುವರೋ ಅವರಿಗೆ ಮೊದಲು ಮದುವೆ ಎಂದು ಅವರಿಗೆ ಶಿವನು ತಿಳಿಸಿದನು.

ಸ್ಕಂದನು ನವಿಲನ್ನೇರಿ ಏಳುಸಾರಿ ಭೂ ಪ್ರದಕ್ಷಿಣೆ ಮಾಡಲು ಹೊರಟನು. ಆದರೆ ಗಣಪತಿಯು ತಂದೆ-ತಾಯಿಗಳು ಜಗತ್ತನ್ನೇ ಹಡೆದವರು (ಜಗತಃ ಪಿತರೌ ಎಂದು ಕಾಳಿದಾಸ ಸ್ತುತಿಸಿದ್ದಾನೆ) ಅವರ ಸುತ್ತಲು ತಿರುಗಿದರೆ ಜಗತ್ತನ್ನೇ ತಿರುಗಿದಂತೆ ಎಂದು ಭಾವಿಸಿ, ಏಳುಸಾರಿ ಪಾರ್ವತಿ ಪರಮೇಶ್ವರರ ಸುತ್ತಲು ತಿರುಗಿದನು. ಸ್ಕಂದನು ಬಂದು ತಾನು ಪಣದಲ್ಲಿ ಸೋತನೆಂದು ತಿಳಿದು ತಪಸ್ಸುಮಾಡಲು ಹೊರಟು ಹೋದನು. ಗಣಪತಿಯು ಮದುವೆಯಾದ ಬುದ್ಧಿ ಮತ್ತು ಸಿದ್ಧಿ ಎಂಬ ಕನ್ಯೆಯರು ಸಾಂಕೇತಿಕ ಎಂದು ತಿಳಿಯಬೇಕು ಬುದ್ಧಿವಂತಿಕೆಯಿಂದ ಕೈಗೊಂಡ ಕಾರ್ಯಗಳು ಸಿದ್ಧಿಯನ್ನೈದುತ್ತವೆ.

ಆ ಸಿದ್ಧಿಯು ನಮ್ಮ ಪಂಚವಾರ್ಷಿಕ ಯೋಜನೆಗಳು ಎಂದು ತಿಳಿದು ಕೊಂಡರೆ ಅವು ಯಶಸ್ವಿಯಾಗಬೇಕಾದರೆ, ಕವಿವರ ಅಂಬಿಕಾತನಯದತ್ತರು ಹೇಳಿದಂತೆ ಯೋಜನೆಯ ಉತ್ತಮ ಯೋಚನೆಯ ತಳಹದಿಯ ಮೇಲೆ ರೂಪಿತವಾಗಬೇಕು. ಶಿವಪುರಾಣದಲ್ಲಿ ವಿನಾಯಕನು ವಿವಾಹವಾದದು ಸಿದ್ದಿ ಮತ್ತು ಬುದ್ಧಿ(ಸಮೃದ್ಧಿ) ಎಂಬುವರೊಡನೆ ಎಂದಿದೆ. ಕ್ಷೇಮ ಮತ್ತು ಲಾಭ ಮಕ್ಕಳು (ವಿಶ್ವವ್ಯಾಪೀ ಗಣೇಶ) ಡಾ॥ ಸಂಪೂರ್ಣಾನಂದರು, ಗಣಪತಿ ಕುರಿತು ಇಂಗ್ಲಿಷ್‌ನಲ್ಲಿ ಒಂದು ಉತ್ತಮ ಗ್ರಂಥವನ್ನುಬರೆದು ಪ್ರಕಟಿಸಿದ್ದರು, ಗಣಪತಿಯ ಅರ್ಥವಿಶ್ಲೇಷಣೆಯನ್ನು ಮಾಡುವಾಗ ಶ್ರೀ ರಾಯ್ ಎಂಬವರ ಅಭಿಪ್ರಾಯವನ್ನು ಹೀಗೆ ಉಲ್ಲೇಖಿಸಿದ್ದರು.

"ಇಲಿ ವಿವೇಚಕ, ವಿಭಾಜಕ, ಭೇದಕಾರಕ ವಿಸ್ತಾರಕ. ವಿಶ್ಲೇಷಕ ಬುದ್ಧಿ. ಅದನ್ನು ವಾಹನವಾಗಿ ಮಾಡಿಕೊಂಡು ಮುಂದಡಿಯಿಡಬೇಕು ಗಣೇಶನ ಮೊದಲ ಶಿರಸ್ಸು ಹೋದದ್ದು ಅಹಂಕಾರನಾಶದ ಕುರುಹು ಆನೆಯ ಶಿರ ಸಮನ್ವಯ ಬುದ್ಧಿ. ಲಂಬೋದರತ್ವ ಅನೇಕ ಬ್ರಹ್ಮಾಂಡ ಅಡಗಿರುವದರಿಂದ ಏಕದಂತ ಅದ್ವೈತರೂಪ. ಮೋದಕ ಆನಂದ ಉಂಟುಮಾಡುವನ.



ಇನ್ನು ಲೌಕಿಕವಾಗಿ ಇಲಿ ಪಶು. ಸಂಚಾರ ರಾತ್ರಿಯಲ್ಲಿ ಮೋಹವನ್ನು (ಅಜ್ಞಾನವನ್ನು) ರಾತ್ರಿಗೆ ಹೋಲಿಸುತ್ತಾರೆ. ಇಲಿಗೆ ಜೀವನಕ್ಕೆ ಸಾಮ್ಯ. ಅಜ್ಞಾನ ಹತ್ತಿಕ್ಕಿ ಜ್ಞಾನಹೊಂದಬೇಕು."

ನನ್ನ ಅಭಿಪ್ರಾಯದಂತೆ ನಮ್ಮ ಪಂಚವಾರ್ಷಿಕಯೋಜನೆಗಳು ಯಶಸ್ವಿಯಾಗಲು ಯೋಜನೆಗಳ ಹಣವನ್ನು ಒಳಗಿಂದೊಳಗೇ ಗಿಳಂಕರಿಸುವ ಮತ್ತು ಕಳಪೆ ಕೆಲಸವನ್ನು ತಯಾರುಮಾಡುವ ಧೂರ್ತರು, ಕುತಂತ್ರಿಗಳು, ಈಮಂತ್ರಿಗಳು, ಕಂತ್ರಾಟದಾರರ ಸಂಕೇತವಾದ ಇಲಿಯನ್ನು ನಮ್ಮ ಗಣರಾಷ್ಟ್ರವೆಂಬ ಗಣಪತಿಯು ಹತ್ತಿಕ್ಕಿ ಮೆಟ್ಟಿದರೆ ಮಾತ್ರ ಯಶಸ್ವಿಯಾಗಿ ಕಲ್ಪವೃಕ್ಷದಂತೆ ಫಲ ಕೊಡಬಲ್ಲವು.

ಕಲ್ಪವೃಕ್ಷವಾದ ತೆಂಗಿನ ಮರದ ಕುರಿತು "ನೆನೆ ನೀನು ಮನದಲ್ಲಿ" ಎಂಬ ಭಾವಪೂರ್ಣ ಕವನದಲ್ಲಿ ತೋಡಿಕೊಂಬುವ ಹುಳಗಳೊಳತಂಪ್ರವೋ? ಎಂದು ಸಿರ್ಸಿಯ ಕವಿ ಶ್ರೀ ಜಿ. ಕೆ. ಹೆಗಡೆಯವರು ಸಂದೇಹವನ್ನು ವ್ಯಕ್ತಪಡಿಸಿದ್ದರು. ಈ ಕಲ್ಪವೃಕ್ಷವು ಮೇಲೆದ್ದು ಬಂದು ಫಲಕೊಡಬೇಕಾದರೆ ಈ ತೋಡಿಕೊಂಬುವ ಹುಳಗಳ ಹಾಗೂ ಇಲಿಗಳ ಒಳತಂತ್ರ ನಿಷ್ಫಲವಾಗಬೇಕು.

"**ರಾಜಾ ಕಾಲಸ್ಯ ಕಾರಣಂ**" ಎಂಬ ಉಕ್ತಿಯನ್ನು ಇಂದು ಯುವಾಃ ಕಾಲಸ್ಯ ಕಾರಣಂ ಯುವೈಃ ರಾಷ್ಟ್ರಸ್ಯ ತಾರಣಂ (ರಕ್ಷಣೆ) ಎಂದು ಬದಲಾಯಿಸಿ ಹೇಳಬೇಕಾಗಿದೆ.

ನಮ್ಮ ಭಾವೀಜನಾಂಗವನ್ನು, ರಾಷ್ಟ್ರವನ್ನು ಮುನ್ನಡೆಸಿಕೊಂಡು ಹೋಗುವ ಹೊಣೆ ಕಲಿಯುತ್ತಿರುವ ಯುವಕರಿಗೆಸಲ್ಲುತ್ತದೆ ಯುವಕರಿಗೆ ಮಾತ್ರವಲ್ಲ ಯುವತಿಯರಿಗೂ ಇದು ಅನ್ವಯಿಸುತ್ತದೆ, ರಾಷ್ಟ್ರಶರೀರವನ್ನು ಒಡೆಯುವದನ್ನು ತಡೆಯಲು ಅವರು ಸರ್ಪಗಾವಲು ಮಾಡಬೇಕಾಗಿದೆ, ಈ ವಿನಾಯಕರು ರಾಷ್ಟ್ರದ ಭದ್ರತೆಯನ್ನು ಕಾಯುವ ಭಾವೀನಾಯಕರಾಗಬೇಕಾಗಿದೆ.

ಇಂದು ನಾವು ಪೂಜಿಸುವ ಗಣಪತಿಯು ಗಣರಾಜ್ಯದ ಪ್ರತೀಕವಾಗಬೇಕಾಗಿದೆ. ನಮ್ಮ ಗಣರಾಜ್ಯದ ಸರ್ವಾಂಗೀಣ ಪ್ರಗತಿಯಲ್ಲಿ ಕರ್ತವ್ಯಸಲ್ಲಿಸುವುದೇ ಇಂದು ನಾವು ಮಾಡಬೇಕಾದ ಸರ್ವೋತ್ತಮ ದೇಶಪೂಜೆಯಾಗಿದೆ, ಈಶಪೂಜೆಯಾಗಿದೆ.

ದೇಶಸೇವೆಯೇ ಈಶಸೇವೆ ಎಂಬ ಮಾತು ಇಂದಿನ ಮಹಾಮಂತ್ರವಾಗಿದೆ ನಮ್ಮ ಸಮಗ್ರಜನತೆಯ ಆರ್ಥಿಕ ಅಭಿವೃದ್ಧಿ, ಶಿಸ್ತಿನ ಸಂಘಟನೆ, ಹಾಗೂ ಸಶಕ್ತ ಜನಾಂಗದ ಚೈತನ್ಯಪೂರ್ಣವಾದ ಸಮಗ್ರ ಮೂರ್ತಿಭವನವಾದಾಗ ಯಾವ ರಾಷ್ಟ್ರದವರಿಗೂ ನಮ್ಮ ಮೇಲೆ ದಾಳಿ ಮಾಡಲು ಬರುವ ಧೈರ್ಯವಾಗಲಿಕ್ಕಿಲ್ಲ.

---

೧. ಜೀವನವೆಲ್ಲವೂ ಮಹಾದೇವನದು ಎಂಬ (ಈಶಾವಾಸ್ಯಮಿದಂ ಸರ್ವಂ] ತಿಳಿವಳಿಕೆಯಿಂದ ಕಾಯಕವೇಕೈಲಾಸ ಎನ್ನುವಂತೆ ಇಡೀಜೀವನವೇ ದಿವ್ಯ ಜೀವನವಾಗಿ ವಿಕಾಸಗೊಳ್ಳುವಂತೆ ರೂಪಿಸಿರುವ ವೀರಶೈವ ತತ್ವ ಮತ್ತು ಆಚರಣೆಗಳಲ್ಲಿ ದೇಶಸೇವೆಯೂ ಈಶಸೇವೆಯಲ್ಲಿ ಒಳಗೊಂಡಿರುತ್ತದೆ.

## ಚಿಂತನ – ಮಂಥನ

### ಒಳ್ಳೆಯ ಹವ್ಯಾಸ ಬೆಳಸಬೇಕು.

ಚದ್ದಲಸೆ ನಿಘ್ನೇಶ್ವರ ಶರ್ಮಾ, ಹುಣ್ಸೆಕೊಪ್ಪ–ಮೊಕ್ಕಾ - ಅಂಚೆ, - ಶಿರಸಿ [ಉ.ಕ.]

ಮನಸ್ಸಿನ ಗತಿ ಬಹು ಸೂಕ್ಷ್ಮ, ಅದು ಅತ್ತಿತ್ತ ಹರಿದಾಡುತ್ತಲೇ ಇರುತ್ತದೆ. ಒಂದೇಕಡೆ ಸ್ಥಿರವಾಗಿ ಇರುವುದೇ ಇಲ್ಲ. ಏನನ್ನಾದರೂ ಕೇಳಬಯಸುತ್ತದೆ. ಅಪ್ರಿಯ ಅಹಿತ ಸಂಗತಿಗಳನ್ನು ಅದು ಅಪೇಕ್ಷಿಸುತ್ತದೆ. ಹೀಗೆ ಅದರ ಚಲನೆ ಸಂಚಾರ ಬಹುಮುಖ, ಆದರೆ ಈ ರೀತಿ ಚಂಚಲವಾಗಿ ಹರಿದಾಡುವುದರಿಂದ ಏನನ್ನು ಸಾಧಿಸಲಾಗುವುದಿಲ್ಲ. ಯಾವ ಉತ್ತಮ ಸಂಸ್ಕಾರವೂ ಆಗುವುದಿಲ್ಲ. ಹಾಗಾಗಿ ಅದನ್ನು ತಿದುವುದಕ್ಕೆ - ಸಂಸ್ಕರಿಸುವುದಕ್ಕೆ ಸರಿಯಾದ ಮಾರ್ಗ ಹಿಡಿಯುವುದು ತೀರ ಅವಶ್ಯ. ಇದರಲ್ಲಿ ಒಳ್ಳೆಯ ಗ್ರಂಥ ಓದುವ, ತಿಳಿಯುವ ಹವ್ಯಾಸ ಬಹಳ ಉಪಯುಕ್ತವಾದುದು ನಮ್ಮ ಬಿಡುವಿನ ವೇಳೆಯಲ್ಲಿ ಮನಸ್ಸಿಗೆ ಈ ರೀತಿಯ ಸಮರ್ಪಕ ಅವಲಂಬನೆ ದೊರೆತರೆ ಅದು ಆರೋಗ್ಯಕರವಾಗಿ ಬೆಳೆದು ಕೊಳ್ಳುತ್ತದೆ.

ಶರೀರದ ಬೆಳವಣಿಗೆ ಪೌಷ್ಟಿಕ ಆಹಾರದ ಆವಶ್ಯಕತೆಯಿರುವಂತೆ ಮನಸ್ಸಿನ ಬೆಳವಣಿಗೆಗೂ ಹದ ಬದ್ಧ ವಿಕಾಸಕ್ಕೂ ಸತ್ವಶಾಲಿ ವೈಚಾರಿಕ ಗ್ರಂಥಗಳ ಅಧ್ಯಯನವೂ ಅವಶ್ಯಕ. ಏನನ್ನಾದರೂ ತಿನ್ನುವುದರಿಂದ ಆರೋಗ್ಯಕ್ಕೆ ಅಪಾಯದ ಸಂಭವ ವಿರುವಂತೆ ಆಯೋಗ್ಯ-ಹಸಿ-ಬಿಸಿವಿಚಾರದ ಗ್ರಂಥಗಳನ್ನು ಓದುವುದರಿಂದ ಮನಸ್ಸಿನ ಸುಪ್ರಸನ್ನ, ಜಾಗೃತ ಸ್ಥಿತಿಯು ಹದಗೆಡುವುದಲ್ಲದೆ ಉದ್ವೇಗ-ವಿಚಾರಗಳಿಗೂ ಅಸ್ಪದವಾಗುವುದುಂಟು. ಆಗ ಅದನ್ನು ಸುಧಾರಿಸಲು ಬಹಳ ಕಾಲದ ಪ್ರಯತ್ನವು ಬೇಕಾದಿತು. ಬಾಯಿಗೆ ಸವಿಯೆನಿಸಿದ ವಸ್ತುಗಳು ಶರೀರಕ್ಕೂ ಹಿತವೆನ್ನಿಸುತ್ತವೆ ಎಂದು ಹೇಳಬರುವುದಿಲ್ಲ. ಹಾಗೆ ಕಣ್ಣಿಗೆ-ಕಿವಿಗೆ ಇಂಪಾದುದು ಮನಸ್ಸಿಗೂ ಸೊಗಸು-ಸ್ವಾದಿಷ್ಟಕರವಾದೀತೆಂದು ತಿಳಿಯುವ ಹಾಗಿಲ್ಲ. ಈ ಕಾರಣದಿಂದ ಮನಸ್ಸಿಗೆ ಸಂಸ್ಕಾರ - ಸಂತೋಷವಾಗುವ ಹಾಗೆ ಓದುವ ಹವ್ಯಾಸ ಹಿಡಿಸಿದರೆ ಅದಕ್ಕೆ ಒಳ್ಳೆಯ ಆಹಾರ ನೀಡಿದಂತೆ ಆಗುತ್ತದೆ.

ಈ ರೀತಿ ಓದುವ ಹವ್ಯಾಸದಲ್ಲಿ ಒಳ್ಳೆಯ ನಮಗೆ ಒಳ್ಳೆಯ ಸಂಗಾತಿ ಇದ್ದ ಹಾಗೆ ಅದು ಕಾಲ-ಕಾಲದ ವಿಚಾರಗಳನ್ನು ತೀರಿಸುತ್ತವೆ. ಸನ್ಮಿತ್ರನಾದವನು ನಮಗೆ ಹಿತವಾದ ಮಾತುಗಳನ್ನು ಹೇಳುವಹಾಗೆ ಈ ಗ್ರಂಥಗಳೂ ಹಿತವಾದುದನ್ನು ಬೋಧಿಸುತ್ತವೆ. ಯುಕ್ತ – ಆಯುಕ್ತ ಸಂಗತಿಗಳನ್ನು ವಿವೇಚಿಸಿ ತಿಳಿಸುತ್ತವೆ. ಕೆಲವು ಸಂದರ್ಭ ಮಿತ್ರನಾದವನೂ ಕಾರಣಾಂತರದಿಂದ ನಮ್ಮಿಂದ ದೂರ ಸರಿಯಬಹುದು. ಆದರೆ ಗ್ರಂಥಗಳು ಮಾತ್ರ ದೂರ ಸರಿಯುವುದೇ ಇಲ್ಲ. ನಾವು ಓದುತ್ತಿದ್ದಂತೆಲ್ಲ ಕಾಲಕಾಲಕ್ಕೆ ಬೇಕಾದ ವಿಚಾರಗಳನ್ನು ಪ್ರಚೋದಿಸುತ್ತಲೇ ಇರುತ್ತವೆ. ಮನಸ್ಸಿನ ಈ ಸಂಬಂಧ ಬೆಳೆಸುವುದು ಮಾತ್ರ ನಮ್ಮ ಕೆಲಸ. ಆರಂಭ

ದಲ್ಲಿ ಔಷಧ ಕುಡಿಯುವುದು ರೋಚಕವೇನೂ ಆಗುವುದಿಲ್ಲ. ಅದರ ಪರಿಣಾಮ ಒಳ್ಳೆಯದಾದವೇಲೆ ಆಸಕ್ತಿ ಹೊಂದುತ್ತದೆ. ಹಾಗೆ ಓದುವುದನ್ನು ಅಧ್ಯಯನ ಶೀಲಪ್ರವೃತ್ತಿಯನ್ನೂ ಬೆಳಸಿಕೊಂಡರೆ ಅದು ಕ್ರಮೇಣ ಬೆಳೆಯುತ್ತಾ ಹೋಗುತ್ತದೆ. ಆಹಾರದ ಹಸಿವು ಆದಂತೆ ಮನಸ್ಸಿಗೂ ಓದಲೇಬೇಕೆಂಬ ಹಸಿವು ಅಪೇಕ್ಷೆ ಆಗುತ್ತಿರಬೇಕು. ಆಗ ಅದು ತನ್ನ ಆಹಾರವನ್ನು ಅನ್ವೇಷಿಸುತ್ತದೆ

ಮನಸ್ಸಿನ ಅಸ್ಥಿರತೆಯನ್ನು ನಿಯಂತ್ರಿಸುವಲ್ಲಿ ಸಮರ್ಥರಾದರೆ ನಾವು ನಮ್ಮ ಉದ್ದೇಶ ಸಾಧನೆಗಳನ್ನು ಸಫಲಗೊಳಿಸಬಲ್ಲವು. ನಾವು ಮಾಡುವ ಕೆಲಸಗಳಲ್ಲಿ ಮನಸ್ಸು ತನ್ಮತೆ ಹೊಂದಬೇಕು ಕಾರ್ಯದ ಯಶಸ್ಸಿನತ್ತ ಗಮನವಿಡಬೇಕು. ಅಂದರೆ ಮಾತ್ರ ಆ ಕೆಲಸಗಳು ಹೇಗೆ ಆಗಬೇಕೋ ಹಾಗೇ ಆಗುತ್ತವೆ. ಅದರ ಲೋಪ-ದೋಷಗಳು ತಿಳಿದುಬರುತ್ತವೆ. ಮನಸ್ಸು ಒಂದುಕಡೆ, ಕೆಲಸ ಮತ್ತೊಂದು ಕಡೆಯಾದರೆ ಅದು ಹೇಗೆ ಸಮರ್ಪಕವಾದೀತು ? ಈ ನಿಮಿತ್ತವಾಗಿಯೇ ಆಡಿದ್ದು ಇದ್ದಿರಬೇಕು - "ಮನಃ ಪೂತಂ ಸಮಾಚರೇತ್" ಎಂದು

ಸ್ಥೂಲವಾಗಿ ನೋಡಿದರೆ ಮನಸ್ಸನ್ನು ಹಿಡಿತಕ್ಕೆ ತರುವುದು ಎಷ್ಟು ಕಷ್ಟವೆಂದು ಕಾಣುತ್ತದೋ ಅದು ಅಷ್ಟೇ ಸುಲಭವೂ ಇದೆ. ಅದನ್ನು ಹರಿದಂತೆ ಹರಿಬಿಟ್ಟರೆ ಅದು ಸ್ವಚ್ಛಂದವಾಗಿ ಹರಿದೀತು. ನೀರಿನ ಹರಿವು ಇದ್ದಹಾಗೆ ಅದು. ನೀರಿನಪ್ರವಾಹವನ್ನು ಸ್ವತಂತ್ರವಾಗಿಸಿಬಿಟ್ಟರೆ ಅದು ವೇಗವಾಗಿ ಹರಿದು ಕೊರಕಲು ನಿರ್ಮಿಸೀತು. ಹೊಲದತ್ತ ತಿರುಗಿಸಿದರೆ ಸಮೃದ್ಧ ಬೆಳೆಯನ್ನು ಹೆಚ್ಚಿಸೀತು ಇಲ್ಲಿ ಸಂಸ್ಕಾರ ಮುಖ್ಯ. ಒಳ್ಳೆಯ ಅಭಿರುಚಿ ಬೆಳಸಿ ಓದುವ ಹವ್ಯಾಸ ಹೆಚ್ಚಿಸಿದರೆ ಮನಸ್ಸಿನ ವಿಕಾರಗಳು ಅಳಿದುಹೋಗುತ್ತವೆ ಗಾಂಧೀಯವರು ಒಮ್ಮೆ ಈ ರೀತಿ ಓದುವ ವಿಷಯ-ದಲ್ಲಿ ಒಂದು ಮಾತು ಹೇಳಿದ್ದರು. ನಾನು ನಿಯಮಿತವಾಗಿ ಓದುವಗ್ರಂಥಗಳನ್ನು ನಿತ್ಯವೂ ಓದಲೇ ಬೇಕು. ನನಗೆ ಅದು ಆಹಾರವಿದ್ದಹಾಗೆ. ಶರೀರದ ಆಹಾರ ಒಮ್ಮೆ ಇಲ್ಲದಿದ್ದರೂ ಬದುಕಿ ಉಳಿದೇನು ಆದರೆ ಮನಸ್ಸಿನ ಆಹಾರವಿಲ್ಲದಿದ್ದರೆ ತುಂಬಾ ಕಳವಳ ಪಡುವಂತಾಗುತ್ತದೆ. ಅಂದಾಗ ಓದುವ ಹವ್ಯಾಸವನ್ನು ಅವರು ಎಷ್ಟು ಶ್ರೇಷ್ಠವಾಗಿ - ಬಲಿಷ್ಟವಾಗಿ ಬೆಳಸಿಕೊಂಡಿದ್ದರು ಎಂಬುದು ಇದರಿಂದ ವೇದ್ಯ.

ಹರಿದಾಡುವ ಮನಸ್ಸಿಗೆ ಹವ್ಯಾಸದ ಅವಲಂಬನೆ ಅವಶ್ಯ ಬೇಕು ಆಸರೆಯಾಗಿ ಅದನ್ನು ನೀಡಿದರೆ ಅದಕ್ಕೆ ಅದು ಅತುಗೊಳ್ಳುತ್ತದೆ. ಕ್ರಮಕ್ರಮವಾಗಿ ಹಿಡಿದುಕೊಳ್ಳುತ್ತದೆ. ಓದುವ ಅಭ್ಯಾಸ ಬೆಳಸಿದರೆ ನಂತರ ಅದೇ ಓದಿಸಿಕೊಳ್ಳುತ್ತದೆ. ಶುಚಿ-ರುಚಿಯಾದುದನ್ನು ನೀಡಿದರೆ ತುಂಬ ಆರೋಗ್ಯಕರವಾಗಿಯೂ ಪ್ರವರ್ಧಿಸುತ್ತದೆ. ಕೆರಳವುದು-ಅರಳುವುದು ಎರಡೂ ಅದರ ಸಹಜ ಪ್ರವೃತ್ತಿ ಇದರಲ್ಲಿ ಒಳ್ಳೆಯ ಹವ್ಯಾಸ ಹೆಚ್ಚಿದರೆ ಅದನ್ನು ಅರಳಿಸುವುದಾಗಲೀ ಅದರ ತುಡಿತ-ಮಿಡಿತಗಳನ್ನು ನಿಯಂತ್ರಿಸುವುದಾಗಲೀ ನಮಗೆ ಅಸಾಧ್ಯವಾಗದು.



## ವಿಜ್ಞಾನ ಮತ್ತು ಆಧ್ಯಾತ್ಮ

ಎಚ್. ಎಸ್. ನರಸಿಂಹ ಜೀಯರ್, ಶ್ರೀ ಬಸವೇಶ್ವರ ಆಂಗ್ಲ ಶಾಲೆ, ತುಮಕೂರು.

ಹುಟ್ಟು ಸಾವುಗಳನ್ನು ಈ ಲೋಕದಲ್ಲಿ ಎಲ್ಲರೂ ಅನುಭವಿಸಲೇಬೇಕು. ಸಾವೆನ್ನುವುದೇ ಒಂದು ಸೋಜಿಗದ ಸಂಗತಿ ಅದರಾಚೆ ಏನಿದೆ ಎಂಬುದನ್ನು ತಿಳಿದವರಿಲ್ಲ !

ಆಧ್ಯಾತ್ಮವಾದಿಗಳ ನಂಬಿಕೆ ಪ್ರಕಾರ ಜೀವವಸ್ತು ಶಾಶ್ವತವಾದುದು. ಜೀವ ಒಂದು ದೇಹವನ್ನು ಬಿಟ್ಟು ಮತ್ತೊಂದು ದೇಹವನ್ನು ಪಡೆಯುತ್ತದೆ. ದೇಹಾಂತರ ಪ್ರಾಪ್ತಿಯಲ್ಲಿ ದೇಹಿ ಎನಿಸುವ ಜೀವ ಉಳಿದೇ ಇರುತ್ತಾನೆ. ಈ ನಿಲುವನ್ನು ಹೊಂದಿದ ಎಲ್ಲಾ ಧರ್ಮಗಳೂ ಪುನರ್ಜನ್ಮವನ್ನು ನಂಬುತ್ತವೆ. ಪುನರ್ಜನ್ಮ ಇದೆ ಎಂದ ಮೇಲೆ ಪೂರ್ವಜನ್ಮದ ಸ್ಮೃತಿಯೂ ಸಾಧ್ಯವಿದೆ. ಜೈನ ಬೌದ್ಧ ಹಿಂದೂ ಸಂಪ್ರದಾಯಗಳ ಯೋಗ ಸಾಧನೆಯಲ್ಲಿ ಆವರಣಗಳು ಕಳಚಿಬಿದ್ದಾಗ ಪೂರ್ವಾನುಸ್ಮೃತಿ ಒದಗುವುದೆಂದು ನಂಬಿಕೆ ಇದೆ. ಆದರೆ ಸಾಧನೆಯೇ ಇಲ್ಲದೆ ಪೂರ್ವಜನ್ಮ ಸ್ಮರಣೆ ಇರುವ ಅನೇಕ ವಿವರಣೆಗಳನ್ನು ಘಟನೆಗಳನ್ನು ಪತ್ರಿಕೆಗಳಲ್ಲಿ ಓದುತ್ತಿದ್ದೇವೆ. ಸತ್ತವನು ಮತ್ತೆ ಜನ್ಮವೆತ್ತಿ ಹಿಂದಿನದನ್ನೆಲ್ಲಾ ನೆನೆಸಿಕೊಳ್ಳುವುದು ಸಾಮಾನ್ಯವಾಗಿ ನಮ್ಮ ಅನುಭವದಲ್ಲಿಲ್ಲ. ಆದ್ದರಿಂದ ವಿಜ್ಞಾನದ ದಾರಿ ಹಿಡಿದ ವಿದ್ಯಾವಂತರು ವಾಸ್ತವವಾಗಿ ಅದು ಜರುಗುತ್ತದೆ ಎನ್ನಲು ಆಧಾರ ಸಾಲದು ಎಂದೇ ಅವರ ಸಾಮಾನ್ಯ ತಿಳುವಳಿಕೆ. ಆದರೆ ಮೂಲಭೂತವಾಗಿ ಈ ಪುನರ್ಜನ್ಮದ ಸ್ಮೃತಿ ಅಸಂಭವವಲ್ಲವೆಂದು ಈಗ ಸ್ಪಷ್ಟವಾಗಿದೆ.

ಈ ಬಗ್ಗೆ ಕೆಲವು ನಡೆದಿರುವ ವಾಸ್ತವಿಕ ಘಟನೆಗಳನ್ನು ಪರಿಶೀಲಿಸೋಣ. ಆಗ್ರಾನಗರದಲ್ಲಿ ಪೋಸ್ಟ್ ಮಾಸ್ಟರ್ ಆಗಿದ್ದ ಭಾರ್ಗವ ಎಂಬ ಸದ್ಗೃಹಸ್ಥರ ಮಗಳು ಎರಡು ವರ್ಷದ ಮಂಜುಲತಾ ತಾನು ಇಲ್ಲಿ ಹುಟ್ಟುವ ಮೊದಲು ಧುಲಿಯಾ ಗಂಜಿನ ಮನೆಯೊಂದರಲ್ಲಿ ಇದ್ದುದಾಗಿ ತಿಳಿಸಿದಳು. ಆ ಊರಿಗೆ ಅವಳನ್ನು ಕರೆದೊಯ್ದು ಬಿಟ್ಟಾಗ ಹಿಂದಿನ ಜನ್ಮದಲ್ಲಿ ತಾನಿದ್ದ ಮನೆಯನ್ನು ಗುರ್ತಿಸಿ ಅಲ್ಲಿಯ ಜನರನ್ನೂ ಗುರ್ತಿಸಿದಳು. ಅದು ಪ್ರತಾಪಸಿಂಹ ಚತುರ್ವೇದಿ ಎಂಬುವ ಅಡ್ವೋಕೇಟರ ಮನೆಯಾಗಿತ್ತು. ಎಲ್ಲರೂ ಅತ್ಯಾಶ್ಚರ್ಯ ಪಟ್ಟರಲ್ಲದೆ ವಿವರಗಳನ್ನು ಪರಿಶೀಲಿಸಲಾಗಿ ಈ ವಕೀಲರ ತಮ್ಮ ವಿಶ್ವೇಶ್ವರನಾಥ ಎಂಬುವರ ಹೆಂಡತಿ 1952ರಲ್ಲಿ ತೀರಿಕೊಂಡ-ಳೆಂದೂ, ಈ ಹುಡುಗಿ ಅದೇ ಸಮಯದಲ್ಲಿ ಹುಟ್ಟಿದಳೆಂಬುದೂ ಖಚಿತವಾಯಿತು.

ಟಿಬೆಟ್ ದೇಶವು ಧರ್ಮ ಪ್ರಭುತ್ವವಾಗಿದ್ದಾಗ ಲಾಮಾ ಪೀಠಗಳಿಗೆ ಅಧಿಕಾರಿಗಳನ್ನು ಆರಿಸುವಾಗ ಪುನರ್ಜನ್ಮ ಸ್ಮೃತಿಯನ್ನು ಗಮನಿಸಿ ಆರಿಸುತ್ತಿದ್ದರು. ಒಬ್ಬ

ಲಾಮ ತೀರಿಕೊಂಡಾಗ ತನ್ನ ಉತ್ತರಾಧಿಕಾರಿಯಾಗಿ ತಾನೇ ಜನ್ಮವೆತ್ತುತ್ತಾನೆಂಬ ನಂಬಿಕೆ ಇದ್ದಿತು. ಲಾಮ ಪೀಠಕ್ಕೆ ಉತ್ತರಾಧಿಕಾರಿ ಸಾಮಾನ್ಯನಾಗಿ ಹಸುಳೆ ಅಥವಾ ಸಣ್ಣ ಹುಡುಗನಾಗುತ್ತಿದ್ದ. ಒಮ್ಮೆ ಒಂದು ಶ್ರೀಮಂತ ಮಠದ ಲಾಮಾ ತೀರಿ-ಕೊಂಡಾಗ ಅವನ ಉತ್ತರಾಧಿಕಾರಿಯನ್ನು ಗುರ್ತಿಸಲು ಮಠದ ನಿರ್ದೇಶಕರು ಬಹುಕಾಲ ಅಲೆದು ಶಕುನ ಸಂಕೇತಗಳನ್ನು ಅವಲಂಬಿಸಿ ಒಂದು ಹಳ್ಳಿಯ ಮಗುವನ್ನು ಆರಿಸಿದರು. ಆ ಮಗುವಿಗೆ ಆಗ ನಾಲ್ಕು ವರ್ಷಗಳು ಹಾಗೂ ಲಾಮ ತೀರಿಕೊಂಡೂ ನಾಲ್ಕು ವರ್ಷಗಳಾಗಿದ್ದುವು.

ಮಗುವನ್ನು ಲಾಮಸೆಲಿ ಎಂಬ ಮಠವಿದ್ದ ಊರಿಗೆ ಕರೆತರುತಿದ್ದಾಗ ಮಠದ ಊಳಿಗದವನೊಬ್ಬನು ನಶ್ಯಹಾಕುವುದನ್ನು ನೋಡಿದ ಮಗುವು ಅವನ ಬೆಳ್ಳಿಯ ನಶ್ಯದ ಡಬ್ಬಿಯನ್ನು ಕಿತ್ತುಕೊಂಡು ಅದು ತನ್ನದೆಂದೂ ಊಳಿಗದವನು ಅದನ್ನು ಕದ್ದಿದ್ದಾನೆಂದೂ ಆಪಾದಿಸಿತು ವಿಚಾರಿಸಲಾಗಿ ಊಳಿಗದವನು ಹಿಂದಿನ ಲಾಮ ಸತ್ತನಂತರ ಅವರ ನಶ್ಯದ ಡಬ್ಬಿಯನ್ನು ಕಳವು ಮಾಡಿದ್ದುದು ತಿಳಿಯಿತು.

ಮಠಕ್ಕೆ ಬಂದೊಡನೆಯೇ ಮಗುವು ಬಲಕ್ಕೆ ತಿರುಗಲು ಹೇಳಿತು. ಆದರೆ ಅಲ್ಲಿ ಗೋಡೆಯಿತ್ತು. ಹೊಸಲಾಮಾಗೆ ಎಡಗಡೆ ಕೊಠಡಿ ವ್ಯವಸ್ಥೆ ಮಾಡಿದ್ದರು. ಹಿಂದಿನ ಲಾಮ, ಬಲಗಡೆ ಕೊಠಡಿಯಲ್ಲಿ ಇರುತ್ತಿದ್ದರು. ಅವರು ಸತ್ತಮೇಲೆ ಅದನ್ನು ಮುಚ್ಚಿ ಎಡಗಡೆ ಕೋಣೆ ಸಿದ್ಧಪಡಿಸಿದರು. ಈಮಗ ಈ ಊರಿಗೆ ಬಂದುದು ಇದೇ ಮೊದಲು. ಅದಕ್ಕೆ ಈ ವಿಷಯ ತಿಳಿದುದಾದರೂ ಹೇಗೆ?

ಮಗುವು ಅಧಿಕಾರ ಸ್ವೀಕರಿಸುವ ಸಮಾರಂಭದಲ್ಲಿ ಚಾಕುಡಿಯಲು ಬಟ್ಟಲೊಂದನ್ನು ಇಡಲಾಯಿತು. ತಕ್ಷಣ ಮಗವು ಅದು ತನ್ನ ಬಟ್ಟಲಲ್ಲವೆಂದೂ ತನ್ನ ಬೆಳ್ಳಿಯ ಬಟ್ಟಲು ಉಗ್ರಾಣದ ಪೆಟ್ಟಿಗೆಯ ತಳದಲ್ಲಿದೆಯೆಂದೂ ತಿಳಿಸಿತು. ವ್ಯವಸ್ಥಾಪಕರಿಗೇ ಈ ವಿಷಯ ತಿಳಿಯದು. ಉಗ್ರಾಣದ ಪೆಟ್ಟಿಗೆ ಪರಿಶೀಲಿಸಿದಾಗ ಹಿಂದಿನ ಲಾಮನ ಹೆಸರನ್ನು ಕೆತ್ತಿದ್ದ ಬೆಳ್ಳಿಯ ಬಟ್ಟಲೊಂದು ದೊರೆಯಿತು. ಅದರಲ್ಲಿಯೇ ಚಾವನ್ನು ಕೊಡಲಾಯಿತು.

ತನ್ನ ಎಲ್ಲಾ ಚಟುವಟಿಕೆಗಳಲ್ಲಿಯೂ ಮಗುವು ಚಿರಪರಿಚಿತರಂತೆ ವ್ಯವಹರಿಸಿ ತಾನು ಹಿಂದಿನ ಲಾಮಾ ಎಂದೇ ಖಚಿತ ಪಡಿಸಿತು. ಈ ವಿವರಗಳನ್ನು ಪ್ರೊ|| ಎಸ್. ಕೆ. ರಾಮಚಂದ್ರರಾವ್‌ರವರು ತಮ್ಮ "ಪರಾಮಾನಸಶಾಸ್ತ್ರ" ಪುಸ್ತಕದಲ್ಲಿ ತಿಳಿಸಿದ್ದಾರೆ.

ತಿರುವಣ್ಣಾಮಲೆಯ ರಮಣಾಶ್ರಮದ "Mountain path" ಎಂಬ ಮಾಸಿಕಪತ್ರಿಕೆಯಲ್ಲಿ (ನಂ. 3, 1966) ವರದಿಯಾಗಿರುವ ಈ ಘಟನೆ ನೋಡಿ.



ದಕ್ಷಿಣ ಅಮೇರಿಕಾದ ಅಮೆಜಾನ್ ಪ್ರಾಂತ್ಯದ ಪೆರು ಎಂಬಲ್ಲಿನ ಕಗ್ಗಾಡಿನಲ್ಲಿ ವಾಸವಾಗಿದ್ದ ಅನಾಗರಿಕ ಕಾಡುಜನರಲ್ಲಿ ಹುಟ್ಟಿದ್ದ ಏಳುವರ್ಷದ ಮಗುವನ್ನು ಅಲ್ಲಿಯ ಚರ್ಚಿನ ಪಾದ್ರಿಯ ಹತ್ತಿರ ಅವನ ತಂದೆ-ತಾಯಿಗಳು ಕರೆತಂದು ಮಗನಿಗೆ ಭೂತ ಹಿಡಿದಿರುವುದನ್ನು ಬಿಡಿಸಲು ಕೇಳಿಕೊಂಡರು. ಆ ಹುಡುಗ ತನ್ನ ತಂದೆ ತಾಯಿಗಳು ಬನಾರಸ್‌ನಲ್ಲಿದ್ದಾರೆಂದೂ ಅಲ್ಲಿಗೆ ಹೋಗಬೇಕೆಂದೂ ಆಗಾಗ ಅಳುತ್ತಿದ್ದ. ಪ್ರಾದ್ರಿಯು ಬನಾರಸ್ ಎಲ್ಲಿದೆ ಎಂದು ಕೇಳಿದಾಗ "ಇಂಡಿಯಾದಲ್ಲಿದೆ" ಎಂದು ಹುಡುಗ ಉತ್ತರಿಸಿದ. ಕುತೂಹಲದಿಂದ ಪಾದ್ರಿಯು ವಿಷಯವನ್ನು ಪರಿಶೀಲಿಸಿ ಅವನ ಹಿಂದಿನ ತಂದೆ ತಾಯಿಗಳ ವಿವರಗಳನ್ನೂ, ಅವರಿರುವ ಬೀದಿಯ ಹೆಸರನ್ನು ಹುಡುಗನಿಂದ ತಿಳಿದು ಲಿಮಾನಗರದದ ನ್ಯಾಯವಾದಿಗೆ ಪತ್ರ ಒಂದನ್ನು ಬರೆದು ಈ ಬಗ್ಗೆ ವಿವವರವನ್ನು ಬನಾರಸ್‌ನಿಂದ ಪಡೆಯಬೇಕೆಂದು ಕೇಳಿಕೊಂಡನು.

ಲಿಮಾನಗರದ ನ್ಯಾಯವಾದಿಯೂ ಆಶ್ಚರ್ಯಪಟ್ಟು ಕುತೂಹಲಕ್ಕಾಗಿ ಬನಾರಸ್ ಮುನಿಸಿಪಾಲಿಟಿ ಅಧಿಕಾರಿಗೆ ಪತ್ರಬರೆದು ಹುಡುಗ ಹೇಳಿದ ತಂದೆ ...ವಾಸದ ಬಗ್ಗೆ ವಿಚಾರಿಸಿ ತಿಳಿಸಬೇಕೆಂದು ಕೇಳಿಕೊಂಡು ಬನಾರಸ್‌ನಲ್ಲಿ ಅಧಿಕಾರಿಗಳು ವಿಚಾರಿಸಿದಾಗ ಆ ಹುಡುಗ ಹೇಳಿದ ಬೀದಿ ಹಾಗೂ ಮನೆಯಲ್ಲಿ ಬ್ರಾಹ್ಮಣ ...ಂಪತಿಗಳಿದ್ದುದು ಹಾಗೂ ಅವರ ಮಗ ಏಳುವರ್ಷದ ಹಿಂದೆ ತೀರಿಕೊಂಡಿ...ದೂ ಸತ್ಯವಾಗಲಾಗಿ ಅವರು ವಿವರಗಳನ್ನು ಲಿಮಾನಗರದ ನ್ಯಾಯ...ದಿಗೆ ತಿಳಿಸಿದರು. ಆ ಹುಡುಗ ತಿಳಿಸಿದಂತೆ ಆತನು ಆಟಕೆಯೊಡನೆ ಆಟ...ಡುವಾಗ ಬೀದಿಯಲ್ಲಿ ಕಾರೊಂದು ಇವನ ಮೇಲೆ ಹರಿದು ಸತ್ತುಹೋಗಿದ್ದನು. ...ಎಲ್ಲಾ ಘಟನೆಗಳೂ ನಿಜವಾಗಿರುವುದನ್ನು ಗಮನಿಸಿ "From the Ganges ...the Amazon" ಎಂಬ ಶೀರ್ಷಿಕೆಯಡಿ 1966 ರಲ್ಲಿ ಪ್ರಕಟಿಸಲಾಗಿದೆ,

ವರ್ಜೀನಿಯಾ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕ ಅಯಾನ್ ಸ್ಟೀವನ್‌ಸನ್ ...ಯವರು ಪುನರ್ಜನ್ಮದ ಬಗ್ಗೆ ಅಧ್ಯಯನ ನಡೆಯಿಸಿ ಇಂತಹ ಸಹಸ್ರಾರು ...ನೆಗಳನ್ನು ಸಂಗ್ರಹಿಸಿದ್ದಾರೆ. ಇವರು ನಮ್ಮ ಭಾರತಕ್ಕೆ 1974 ನೆಯ ...ರ್ಚ 18 ಮತ್ತು 19 ರಂದು ಇಂತಹದೇ ಮತ್ತೊಂದು ಘಟನೆಯನ್ನು ಅಧ್ಯ... ಮಾಡಲು ಭೇಟಿಕೊಟ್ಟಿದ್ದರು. ಇತ್ತೀಚಿನ ಈ ಘಟನೆ ಈ ರೀತಿ ಇದೆ.

ಮೃದುಲಾ ಶರ್ಮಾ ಇಪ್ಪತ್ತೈದರ ಹರೆಯದ ಮೀರತ್ ವಿಶ್ವವಿದ್ಯಾನಿಲ... ರಾಜಕೀಯ ಶಾಸ್ತ್ರದ ಎಂ.ಎ., ಪದವೀಧರೆ, ಈಕೆಯು 1949 ರಲ್ಲಿ ನಾಸ್ತಿಕ್ ...ಜನಿಸಿದಳು. ತಾಯಿ ಶಾಂತಾ ಶಾಸ್ತ್ರಿ. ಈ ತಾಯಿ ಮಗಳಿಬ್ಬರೂ ಡೆಹರಾ...ನಲ್ಲಿ ನಡೆದ ಧಾರ್ಮಿಕ ಸಭೆಗೆ ಹೋಗಿದ್ದಾಗ ಅಲ್ಲಿದ್ದ ವಯಸ್ಸಾದ

ಮಹಿಳೆಯನ್ನು ಗುರ್ತಿಸಿ ಮೃದುಲಾ ಅವಳ ಮಡಿಲಲ್ಲಿ ನೇರವಾಗಿ ಕುಳಿತಳು. ಆ ವೃದ್ಧ ಮಹಿಳೆಯ ಪಕ್ಕದಲ್ಲಿದ್ದ ಇನ್ನೊಬ್ಬ ಹೆಂಗಸನ್ನು ಕುರಿತು ನೀನು ನನ್ನ ತಂಗಿ ಎಂದು ವಿಶ್ವಾಸದಿಂದ ಹೇಳಿದಳು. ನಾನು ನಿನ್ನ ಹಿರಿಯಕ್ಕ ಎಂದು ಅವಳ ಹೆಸರು ಹಿಡಿದೇ ಗುರ್ತಿಸಿದಳು. ವೃದ್ಧ ಮಹಿಳೆಗೆ ಆಶ್ಚರ್ಯವಾಗಿ ಅವಳನ್ನು ತನ್ನ ಮನೆಗೆ ಕರೆದುಕೊಂಡು ಹೋದಾಗ ರೀಪೇರಿಯಾದ ಮನೆಯನ್ನೂ ಅಲ್ಲಿದ್ದ ವಿವರಗಳನ್ನು ಗುರ್ತಿಸಿ ತನ್ನ ಹಿಂದಿನ ಜನ್ಮದ ತಂದೆಯನ್ನೂ ಅಕ್ಕಪಕ್ಕದವರನ್ನೂ ಅವರವರ ಹೆಸರಿನಿಂದ ಕರೆದು ಎಲ್ಲರಿಗೂ ವಿಸ್ಮಯವನ್ನುಂಟು ಮಾಡಿದಳು. ಹಿಂದೆ ಬಿಳಿಬಟ್ಟೆ ಧರಿಸುತ್ತಿದ್ದು ಕಾವಿಧಾರಿಯಾಗಿದ್ದ ಆನಂದ ಸ್ವಾಮಿಯವರನ್ನೂ ಗುರ್ತಿಸುತ್ತಾ ಈ ಕಾವಿಯನ್ನು ಎಂದಿನಿಂದ ಹಾಕುತ್ತಿದ್ದೀರಿ ಹಿಂದೆ ಬಿಳಿ ವಸ್ತ್ರ ಧರಿಸುತ್ತಿದ್ದಿರಲ್ಲಾ ಎಂದೇ ಪ್ರಶ್ನಿಸಿದಳು, ಎಲ್ಲರ ಸಂಶಯವೂ ನಿವಾರಣೆಯಾಗಿ 25 ವರ್ಷಗಳ ಹಿಂದೆ ತಮ್ಮ ಮನೆಯಲ್ಲಿ ಗತಿಸಿದ ನಮ್ಮ ಮಗಳೇ ಮೃದುಲಾ ಆಗಿ ಹುಟ್ಟಿದ್ದಾಳೆಂದು ಖಚಿತಪಡಿಸಿಕೊಂಡರು. ಹಿಂದಿನ ಜನ್ಮದಲ್ಲಿ ಆಕೆ ವಾರಣಾಸಿ ವಿಶ್ವವಿದ್ಯಾನಿಲಯದ ಹಿಂದಿ ಪದವೀಧರೆ. ಆ ವಿವರಗಳನ್ನು ತಿಳಿಸಿದ್ದಳು ಎರಡೂ ಜನ್ಮಗಳ ತಂದೆ ತಾಯಂದಿರನ್ನು ಭೇಟಿಮಾಡಿದ ಮೃದುಳಾಲ ಮೇಲೆ ಪ್ರೀತಿಯ ಹೊನಲನ್ನೇ ಹರಿಸಿ ಮದುವೆ ಮಾಡಿದರು.

ಈ ಘಟನೆಯನ್ನು ಅಧ್ಯಯನ ಮಾಡಲು ಅಯಾ ಸ್ಟೀವನ್ ಸನ್‌ರವರು ಭಾರತಕ್ಕೆ 18,19ನೇ ಮಾರ್ಚಿ 1974ರಲ್ಲಿ ಬಂದು ಆಕೆಯನ್ನು ಹಾಗೂ ಆಕೆಯ ಎರಡೂ ಜನ್ಮಗಳ ತಂದೆ ತಾಯಂದಿರನ್ನೂ ಭೇಟಿಮಾಡಿ ಅನೇಕ ರೀತಿಯ ಪ್ರಶ್ನೆಗಳನ್ನು ಹಾಕಿ ಅವರ ಹೇಳಿಕೆಗಳನ್ನೆಲ್ಲಾ ತಾಳೆ ನೋಡಿ ಕಾಲ, ಮರಣ ಇತರೆ ವಿವರಗಳೆಲ್ಲಾ ಸರಿಹೊಂದಿರುವುದನ್ನು ಗಮನಿಸಿ ಇದನ್ನು 'ನಿಜವಾದ ಪುನರ್ಜನ್ಮದ ಘಟನೆ' ಎಂದು ಖಚಿತವಾಗಿ ಘೋಷಿಸಿದರು. ಇದೇ ವಿವರಗಳು ದಿ ಟೈಮ್ಸ್ ಆಫ್ ಇಂಡಿಯಾದ 1976ನೆಯ ಇಸವಿ ಅಕ್ಟೋಬರ್ 31ರ ಭಾನುವಾರದ ಸಂಚಿಕೆಯಲ್ಲಿ ಸಚಿತ್ರ ವಿವರಣೆಯೊಂದಿಗೆ ಪ್ರಕಟವಾಗಿವೆ.

ಸಾವನ್ನು ಕುರಿತು ಒಂದು ನೂರು ವರ್ಷಗಳ ಸಂಶೋಧನೆಯಿಂದ ಸಂಗ್ರಹಿಸಿದ ಸಂಗತಿಗಳನ್ನೆಲ್ಲಾ ಕ್ರೋಢೀಕರಿಸಿ ಅಯನ್ ಕ್ಯೂರಿಯವರು 'you Cannot die' ಎಂಬ ಗ್ರಂಥದಲ್ಲಿ ಪ್ರಕಟಿಸಿದ್ದಾರೆ. (Fnindings of a Century of Research on death) A Jonathan James Book-Hamlyn ಜನ್ಮಾಂತರ ಮತ್ತು ಕರ್ಮಸಿದ್ಧಾಂತಕ್ಕೆ ಸಂಬಂಧಿಸಿ ಯಾವ ಪೂರ್ವಾಗ್ರಹವಿಲ್ಲದೆ ಮಾನವಶಾಸ್ತ್ರ, ಸಮಾಜಶಾಸ್ತ್ರಗಳ ಆಳವಾದ ಪಾಂಡಿತ್ಯದಿಂದ ಪರಾಮಾನಸ ಶಾಸ್ತ್ರದಲ್ಲಿ ಆಸಕ್ತಿ ತಳೆದು ತೆರೆದ ಮನಸ್ಸಿನಿಂದ ಸತ್ಯಾನ್ವೇಷಣೆ ಮಾಡ ಹೊರಟ



ಅಯಾನ್ ಕ್ಯೂರಿಯವರು ತಿಳಿಸಿರುವ ಅಭಿಪ್ರಾಯಗಳನ್ನು ಎಲ್ಲರೂ ಗಮನಿಸಬೇಕಾದುದು ಅವಶ್ಯವೆನಿಸಿದೆ. ಅವರ ದೀರ್ಘಕಾಲದ ಅಧ್ಯಯನದಿಂದ ವ್ಯಕ್ತವಾಗಿರುವ ಅಂಶಗಳು ಈ ರೀತಿ ಇವೆ.

1. ಸಾವಿನೊಂದಿಗೆ ಜೀವನ ಅಂತ್ಯವಾಗುವುದಿಲ್ಲ
2. ಗತಿಸಿ ಹೋದ ಜೀವಾತ್ಮರು ವಿಭಿನ್ನಸ್ತರ ಅಥವಾ ಲೋಕಗಳಲ್ಲಿ ಅರಿವು ಚಟುವಟಿಕೆಯಿಂದ ಕೂಡಿಯೇ ಇರುತ್ತಾರೆ. ಸ್ಥೂಲ ದೇಹಧಾರಿಗಳಾದ ನಮಗೆ ಅದು ಗೋಚರವಾಗದು ಈ ಸತ್ಯಾಂಶಗಳನ್ನು ಆಳವಾಗಿ ಅಭ್ಯಸಿಸಿ ಗಮನಿಸಿದ ಸ್ವಾಮಿ ಜಗದಾತ್ಮಾನಂದರವರು ತಮ್ಮ ಅಭಿಪ್ರಾಯವನ್ನು ಈ ಕೆಳಕಂಡಂತೆ ವ್ಯಕ್ತಪಡಿಸಿದ್ದಾರೆ.

"ವೈಜ್ಞಾನಿಕ ಮನೋವೃತ್ತಿ ಎಂದು ಕರೆದು ಕೊಳ್ಳುವ ಜನರು ಇಂತಹ ಘಟನೆಗಳನ್ನು ಸಂಶಯದೃಷ್ಟಿಯಿಂದ ನೋಡುತ್ತಾ ಬಂದಿದ್ದಾರೆ. ಈ ಘಟನೆಗಳನ್ನು ಕಂಡರೂ ಸಹ ತಮ್ಮನ್ನು "ಮೂಢನಂಬಿಕೆ ಬಿಡದೆ ವಿಜ್ಞಾನಿ ಯೀತ" ನೆಂದು ಹೀಗಳೆಯುವರೆಂಬ ಭಯದಿಂದ ಧೃಡ ನಿಲುವು ವ್ಯಕ್ತಪಡಿಸಲು ಹಿಂಜರಿಯುತ್ತಾರೆ. ಹೀಗೆ ಸತ್ಯವು ಪೂರ್ವಾಗ್ರಹ ದೂಷಿತರ ಗೊಂದಲದ ಮುಸುಕಿನಲ್ಲಿ ಮರೆಯಾದಂತೆ ಕಂಡರೂ ಯಥಾರ್ಥ ಅನ್ವೇಷಕರಿಗೆ ತನ್ನ ನೈಜಸ್ವರೂಪವನ್ನು ತೋರಿಸದಿರದು" ಎಂದಿದ್ದಾರೆ.

ಇದಕ್ಕಿಂತಲೂ ಬಿಚ್ಚು ಮನಸ್ಸಿನ ಅಭಿಪ್ರಾಯ ಬೇಕೆ?

---

## ವರೆತಪಸ್ವಿ (ಧಾರಾವಾಹಿ-6.)

ಹೆಚ್. ಜಿ. ರಾಧಾದೇವಿ, ಶ್ರೀ ಜಗನ್ನಾಥ ದಾಸರಗುಡಿ ಬ್ರಾಹ್ಮಣರವಾಡಿ, ಮಾನವಿ,
ರಾಯಚೂರು-584 101·

ಸೂರ್ಯನ ಮಹಾತೇಜವನ್ನು ಸುವ್ವಲಾಲಿ
ಬರಿಯ ಕಣ್ಣಿಂದ ಅಳಿಯುವುದೇ ಸುವ್ವಲಾಲಿ
ಸಮುದ್ರದ ಜಲರಾಶಿಯನ್ನೆಲ್ಲ ಸುವ್ವಲಾಲಿ
ಒಂದು ಪುಟ್ಟ ತಂಬಿಗೇಲಿ ತುಂಬಲುಂಟೆ ಸುವ್ವಲಾಲಿ ।

ಇದೇ ರೀತಿಯಾಗಿ ಶ್ರೀ ಮಂಜಯ್ಯ ಹೆಗಡೆಯವರು... ತಮ್ಮ ಅಧಿಕಾರವಧಿಯಲ್ಲಿ ಮುವ್ವತ್ತೇಳು ವರ್ಷಗಳ ಕಾಲ ಮಾಡಿದ ಕೆಲಸಗಳೆಲ್ಲವನ್ನು ಈಪುಟ್ಟ ಆರು ಲೇಖನಗಳಲ್ಲಿ ಸಂಪೂರ್ಣವಾಗಿ ವಿವರಿಸಲು ಸಾಧ್ಯವೆ? ಈ ಲೇಖನ ಮಾಲೆ ಅವರ ಬದುಕಿನ ಮಹಾಕಾರ್ಯಗಳ ಸಮಗ್ರ ಚಿತ್ರಣವೂ ಅಲ್ಲ, ಸಂಪೂರ್ಣ ವಿವರವೂ ಅಲ್ಲ.

ಮಹಾಕಾರ್ಯ ಮಾಡಿದ ಮಹಾಪುರುಷರ ಸ್ಮರಣೆಯೆ ಒಂದು ಪುಣ್ಯಸಾಧನೆ, ಆ ದೃಷ್ಟಿಯಿಂದ ಈ ಲೇಖನಮಾಲೆ ಅವರ ಸ್ಮರಣೆ ಅಷ್ಟೆ,

ಶ್ರೀ ಮಂಜಯ್ಯ ಹೆಗ್ಗಡೆಯವರ ಕುಟುಂಬ ಜೀವನದ ಬಗ್ಗೆ ಕೆಲವು ಮುಖ್ಯ ಅಂಶವನ್ನು ವಿವರಿಸಿ ಈ ಲೇಕನ ಮಾಲೆ ಪೂರ್ಣಮಾಡುತ್ತೇನೆ.

ಹಾಗೂ ಈ ಲೇಖನ ಮಾಲಿಗೆ ಸ್ಫೂರ್ತಿ ನೀಡಿದ ಮಹಾಗ್ರಂಥಗಳಾದ ಮಹಾಚೇತನ "ಗ್ರಂಥದ' ಮೂರು ಭಾಗಗಳಿಗೆ[ಗ್ರಂಥಋಣ ಸ್ವೀಕರಿಸಿದ್ದ ಕಾರಣಕ್ಕೆ] ಅಲ್ಲಿನ ಕೆಲವು ಲೇಖಕರಿಗೆ ನಮಿಸುತ್ತೇನೆ.

ಸಾಮಾನ್ಯವಾಗಿ ಸಮಾಜದ ಗಣ್ಯವ್ಯಕ್ತಿಗಳಾಗಿ ವಿಜೃಂಭಿಸಿದ ವ್ಯಕ್ತಿಗಳು, ಅಥವ ಯಾವುದಾದರೂ ಕಲೆಯಲ್ಲಿ ತಲ್ಲೀನರಾದವರೂ ಕುಟುಂಬದ ಉಳಿದ ಬಂಧು ಬಾಂಧವರ ಪಾಲಿಗೆ ಅಪರಿಚಿತರಾಗಿರುತ್ತಾರೆ.

ಆದರೆ ಶ್ರೀ ಮಂಜಯ್ಯ ಹೆಗಡೆಯವರು ಈ ಮೋಡಿಗೆ ಅಪವಾದ, ಒಂದು ಕಡೆ ಶ್ರೀ ಕ್ಷೇತ್ರದ ಧರ್ಮಾಧಿಕಾರಿಯ ಪಟ್ಟ. ಅಲ್ಲಿನ ಅನಿವಾರ್ಯ ಕೆಲಸ ಕಾರ್ಯಗಳು ಲೆಕ್ಕಾಚಾರದ ಸುವ್ಯವಸ್ತೆ, ಇನ್ನೊಂದು ಕಡೆ ತಾವಾಗಿ ಹಮ್ಮಿಕೊಂಡ ಸಮಾಜದ ಅಭಿವೃದ್ಧಿ ಕಾರ್ಯಗಳು, ವೈದ್ಯಕೀಯ, ಶೈಕ್ಷಣಿಕ, ಸಾಂಸ್ಕೃತಿಕ ರಂಗದ ಎಡಬಿಡದ ಕಾರ್ಯಗಳು.

ಜೊತೆಗೆ ಅಪೂರ್ವ ಚಿತ್ರಕಲೆಯ ರಚನ ಕಾರ್ಯಗಳ ತಲ್ಲೀನತೆ ಲಲಿತಕಲಾ ಗೋಷ್ಠಿಗಳ ನಿರ್ವಹಣೆ, ಈ ಎಲ್ಲಾ ಕಾರ್ಯಭಾರದ ಮಧ್ಯೆ ಕುಟುಂಬದ ಎಲ್ಲಾ ಬಂಧು ಬಾಂಧವರೊಡನೆ ಆತ್ಮೀಯವಾದ ಸಂಪರ್ಕಇಟ್ಟುಕೊಂಡಿದ್ದರು.



ಅವರ ಕುಟುಂಬಕ್ಕೆ ಸೇರಿದ ಪ್ರತಿ ಒಬ್ಬರು ತಮ್ಮ ವೈಯುಕ್ತಿಕವಾದ ಸಿಹಿಯಾದ ಕೆಲವು ನೆನಪು ಹೊಂದಿರುವಂತೆ ಎಲ್ಲರ ಪಾಲಗೆ ಸವಿಯಾದ ಸುಮಧುರ ಸಂಬಂಧ ಹೊಂದಿದ್ದರು,

ನ್ಯಾಯವಾಗಿ ಶ್ರೀ ಮಂಜಯ್ಯ ಹೆಗಡೆ ಅವರಿಗಿದ್ದ ಹೊರಗಿನ ಕಾರ್ಯ ಭಾರದ ಒತ್ತಡ ಗಣ್ಯವ್ಯಕ್ತಿಗಳ ಸಂಪರ್ಕ ನೆನೆಸಿಕೊಂಡರೆ ಬೇರೆ ವ್ಯಕ್ತಿಗಳಾಗಿದ್ದರೆ ಯಾವುದೊ ದಂತಗೋಪುರದಲ್ಲಿ ಕೂತು ಕುಟುಂಬದ ಎಲ್ಲ ಸದಸ್ಯರಿಂದ ದೂರವಾಗಿರ ಬೇಕಾಗಿತ್ತು.

ಆದರೆ ಶ್ರೀ ಮಂಜಯ್ಯ ಹೆಗಡೆ ಅವರು ಕುಟುಂಬದ ಸದಸ್ಯರನ್ನು ವೈಯಕ್ತಿಕ-ವಾಗಿ ಎಷ್ಟು ಗಮನಿಸುತ್ತಿದ್ದರು ಎಂದರೇ........ ಕುಟುಂಬ ಜೀವನದಲ್ಲಿ ಹೆಣ್ಣು ಮಕ್ಕಳಿಗೆ ಸಲ್ಲಿಸಬೇಕಾದ ಪ್ರತಿ ಒಂದೊಂದು ಸಣ್ಣ ಸಣ್ಣ ವಿಷಯಕ್ಕೂ ಗಮನ ನೀಡಿದ್ದರು.

ಮೊದಲು ಹೆತ್ತತಾಯಿ ಅನಂತಮತಿಯಮ್ಮ....ತಾಯಿಯ ಎಲ್ಲಾ ಧಾರ್ಮಿಕ ವ್ರತ ನೇಮಗಳಿಗೂ ಅವರು ಅನುಕೂಲ ಮಾಡಿಕೊಟ್ಟಿದ್ದರು. ಪುಣ್ಯವಂತನಾದ ಮಗನನ್ನು ಪಡೆದ ತಾಯಿ ಸ್ವರ್ಗಸಾಧನೆಗೆ ಅನುಕೂಲವಾಗುವಷ್ಟು ಪುಣ್ಯಗಳಿಸ ಬಹುದು ಎಂದು ಆಧ್ಯಾತ್ಮಿಕ ವಿವರದಲ್ಲಿ ಹೇಳುತ್ತಾರಲ್ಲವೆ? ಜಿನದೇವರ ಪರಮ ಭಕ್ತೆಯಾದ ಇವರ ತಾಯಿ ಶಾಸ್ತ್ರಶ್ರವಣ ಹಾಗೂ ನಿಯಮಬದ್ಧ ಧಾರ್ಮಿಕಳಾದ ಜೈನಸ್ತ್ರೀ ಮಾಡಬಹುದಾದ ಎಲ್ಲಾ ವ್ರತ ನೋಂಪಿಗಳನ್ನು ಮಾಡಿದ್ದರು, ಜೈನರಿಗೆ ಅತಿ ಪವಿತ್ರವಾದ ಅಸಂಖ್ಯ ಮುನಿಗಳ ಮುಕ್ತಿ ಧಾಮವಾಗಿರುವ ತೀರ್ಥಂಕರರ ಸಾಕ್ಷಾತ್ಕಾರದ ಸ್ಥಳವಾದ ... "ಸಮ್ಮೇದ ಗಿರಿಯಾತ್ರೆ" ಅನೇಕ ದೈವಭಕ್ತ ಜೈನರ ಕನಸು, ಕೆಲವರಿಗೆ ಅದರ ಸ್ಮರಣೆಯೆ ಪುಣ್ಯಗಳಿಸುವ ಸಾಧನ, ಶ್ರೀ ಮಂಜಯ್ಯಹೆಗಡೆ ಅವರು ತಾಯಿಗೆ ಸಮ್ಮೇದ ಗಿರಿಯ ಯಾತ್ರೆ ಮಾಡಿಸಿ, ಆ ಕ್ಷೇತ್ರಕ್ಕೆ ಹತ್ತಿರವಾದ ಪಾವಾಪುರ, ಚಂಪಾಪುರ, ರಾಜಗಿರಿ ಮುಂತಾದ ಅನೇಕ ಪುಣ್ಯಪ್ರದ ಕ್ಷೇತ್ರ ದರ್ಶನ ಮಾಡಿಸಿದರು,

ಪುಣ್ಯಪ್ರದವಾದ ಈ ಯಾತ್ರೆಗಳನ್ನು ಮಾಡಿದ ಮೇಲೆ ಸತ್ಪಾತ್ರರಾದ ಯಾಚಕರಿಗೆ ದಾನ ದಕ್ಷಿಣೆ ಸಮಾರಾಧನೆ ಮಾಡಿ ವ್ರತ ನೋಂಪಿ ನಡೆಸಿದರು, ತಾಯಿಗೆ ವೈರಾಗ್ಯ, ದಾನ, ಧರ್ಮ ಯಾತ್ರೆ ತೀರ್ಥಗಳಿಗೆ ಸಹಕರಿಸಿದ ಶ್ರೀ ಮಂಜಯ್ಯ ಹೆಗ್ಗಡೆ ಅವರು.......

ಕುಟುಂಬದ ಕಿರಿಯರಿಗೆ ಸಲ್ಲ ಬೇಕಾದ ಲೌಕಿಕ ಎನಿಸಬಹುದಾದ ಸಣ್ಣ ಸಣ್ಣ ವಿವರಗಳನ್ನು ಗಮನಿಸಿ, ಅವರವರ ಮನಸ್ಸನ್ನು ಯಥೋಚಿತವಾಗಿ ಸಂತೋಷ ಪಡಿಸುತ್ತಿದ್ದರು.

ಶ್ರೀ ಮಂಜಯ್ಯ ಹೆಗ್ಗಡೆ ಅವರ ತಮ್ಮ ಶ್ರೀ ಪುಟ್ಟಸ್ವಾಮಿ ಅವರ ಪತ್ನಿ ಕುಸುಮಾವತಿ, ತಮ್ಮನ ಪಾಲಿಗೆ ಅಣ್ಣಾ ಸ್ವಂತ ತಂದೆಯ ಹಾಗೆ ಇದ್ದರು. ತಮ್ಮನನ್ನು ಉನ್ನತ ವಿದ್ಯಾಭ್ಯಾಸ ಮಾಡಿಸಿ, ಒಳ್ಳೆ ಕನ್ಯೆ ನೋಡಿ ವಿವಾಹ ಮಾಡಿಸಿ ಅವರ ಕುಟುಂಬವನ್ನು ಚೆನ್ನಾಗಿ ನೋಡಿಕೊಂಡರು, ಹೆಣ್ಣುಮಕ್ಕಳಿಗೆ ಒಡವೆ, ಸೀರೆ ಉಡುಗರೆ ಆಸೆ ಇರುತ್ತದೆ,

ಶ್ರೀ ಕ್ಷೇತ್ರಕ್ಕೆ ಈ ದಂಪತಿಗಳು ಬಂದಾಗಾಗಲಿ, ತಾವೇ ಅವರ ಕುಟುಂಬಕ್ಕೆ ಹೋದಾಗಾಗಲಿ ಅರಶಿನ ಕುಂಕುಮದೊಡನೆ ಹಣಾ, ಚಿನ್ನ, ಸೀರೆ ಉಡುಗರೆ ನೀಡುತ್ತಿದ್ದರು, ಈ ಸಣ್ಣ ವಿಷಯ ಪ್ರಸ್ತಾಪಿಸಲು ಕಾರಣ ಏನೆಂದರೆ ಕೆಲವರು ಹೊರಗಿನವರ ಪಾಲಿಗೆ ಉದಾರಿಗಳಾಗಿದ್ದರು, ಕುಟುಂಬದ ಅತಿ ನಿಕಟರಾದ ಬಂಧು ಬಾಂಧವರಿಗೆ ಮೂರು ಕಾಸು ನೀಡಲಾರರು.

ದೀಪದ ಕೆಳಗೆ ಕತ್ತಲೆ ಎಂಬಂತೆ ಇರುತ್ತಾರೆ, ಆದರೆ ಶ್ರೀ ಮಂಜಯ್ಯ ಹೆಗಡೆಯವರು ಎಲ್ಲೆಲ್ಲು ಪ್ರಕಾಶ ಬೀರುವ ರತ್ನ ದೀಪವಾಗಿದ್ದರು.

ಹೊರಗಿನ ವಿದ್ವಾಂಸ ವರ್ಗಕ್ಕೆ, ಆರ್ತಿಗಳಾಗಿ ಬಂದವರಿಗೆ ಇವರು ಉದಾರವಾಗಿ ಹಣದರಾಶಿಯನ್ನು ದಾನಮಾಡುತ್ತಿದ್ದರು, ಅದರಂತೆ ಕುಟುಂಬದ ಬಂಧುಗಳ ಪಾಲಿಗೂ ಉದಾರಿಗಳೆ,

ಶ್ರೀ ಪುಟ್ಟಸ್ವಾಮಿ, ಸೌ. ಕುಸುಮಾವತಿ ದಂಪತಿಗಳನ್ನು ಪ್ರೀತಿಸಿದಂತೆ... ಶ್ರೀ ರತ್ನವರ್ಮ ಹೆಗಡೆ ಹಾಗೂ ಶ್ರೀ ರತ್ನಮ್ಮ ಅವರ ಕುಟುಂಬವನ್ನು ಪ್ರೀತಿಸುತ್ತಿದ್ದರು

ಜೈನರಲ್ಲಿ ಜಿನಬಾಲಕನ ಜನ್ಮಾಭಿಶೇಕ ಕಲ್ಯಾಣಮಹೋತ್ಸವ ಎಂಬ ಅಪೂರ್ವ ಉತ್ಸವ ನಡೆಸುತ್ತಾರೆ. ಈ ಸಂದರ್ಭದಲ್ಲಿ ದೇವೇಂದ್ರ ಶಚಿಮರಾಗಿ ಮೆರವಣಿಗೆಯಲ್ಲಿ ಹೋಗುವುದು ಒಂದು ಅಪೂರ್ವ ಅವಕಾಶ

ಇಂಥಾ ಅಪೂರ್ವ ಅವಕಾಶವನ್ನು ಒಮ್ಮೆ ಶ್ರೀ ರತ್ನವರ್ಮ ಹೆಗಡೆ ದಂಪತಿಗಳಿಗೆ ಹಾಗೂ ಒಮ್ಮೆ ಶ್ರೀ ಪುಟ್ಟಸ್ವಾಮಿ ದಂಪತಿಗಳಿಗೆ ನೀಡಿ ಅವರನ್ನು ಸಂತಸಗೊಳಿಸಿದ್ದರು.

ಇದು ಅವರ ಸಮಾನತೆಯ ಮನಸತ್ವ ತೋರಿಸುತ್ತದೆ. ಆ ಸಂದರ್ಭದಲ್ಲಿ ಶಚಿದೇವಿ ಉಡಬೇಕಾದ ಜರಿಸೀರೆಯನ್ನು ಸಹ ತಾವೆ ನೀಡಿ; ಹರಸಿ-ಹೆಣ್ಣುಮಕ್ಕಳಿಗೆ ಸಂತಸಪಡಿಸಿದ್ದರು.

ಸಿದ್ಧವನಕ್ಕೆ ಹೋಗುವಾಗ ಅಲ್ಲಿನ ವಿದ್ಯಾರ್ಥಿಗಳಿಗೆ ಸಿಹಿತಿಂಡಿಗಳನ್ನು ಹಾಗೂ ಗೇರುಬೀಜಗಳನ್ನು ತಿನ್ನಲು ತೆಗೆದುಕೊಂಡುಹೋಗಿ ಕೊಡುತ್ತಿದ್ದರು.



ಈಗಿನ ಧರ್ಮಾಧಿಕಾರಿಗಳಾದ ಶ್ರೀ ವೀರೇಂದ್ರಹೆಗಡೆ ಅವರು ಅಸ ಪುಟ್ಟ ಬಾಲಕ, ಒಮ್ಮೆ ತಾಯಿಯ ಬಳಿ ಆನೆಬೇಕೆಂದು ಹಟ ಮಾಡಿದ್ದರಂತೆ, ಶ್ರೀ ಮಂಜಯ್ಯ ಹೆಗಡೆಯವರು ಮಗುವಿಗೆ ಹತ್ತು ಇಂಚು ಎತ್ತರದ ಮರದ ಆನೆ ನೀಡಿ ಸಂತೋಷಿಸಿ, ತಮ್ಮ ಆಪ್ತರಾದ ಶಾಸ್ತ್ರಿಗಳೊಡನೆ ಆನೆ ಬೇಕು — ಎಂದು ಅಳುವುದು ಸಾಮಾನ್ಯ ಬಾಲಕನ ಲಕ್ಷಣವಲ್ಲ. ಮಗು ಮುಂದೆ ಉನ್ನತ ಕೀರ್ತಿ ಗಳಿಸಿ ಮಹಾಪುರುಷನಾಗುತ್ತಾನೆ—ಎಂದು ಆನಂದಿಸಿದರಂತೆ.

ಶ್ರೀ ವೀರೇಂದ್ರ ಹೆಗಡೆಯವರು ಜನಿಸಿದ ಸಮಯದಲ್ಲಿಯೂ....... ಅಂದರೇ ಶ್ರೀರತ್ನವರ್ಮ ಹೆಗಡಯವರಿಗೆ ಗಂಡುಮಗು ಹುಟ್ಟಿದ ಸುದ್ದಿ ತಿಳಿದಾಗಲು....

ಇನ್ನು ಧರ್ಮಸ್ಥಳದ ಜ್ಯೋತಿ - ಸರ್ವತೋಮುಖವಾಗಿ ಬೆಳಗುತ್ತದೆ. ಎಂದು ಶುಭನುಡಿದರಂತೆ, ಅವರ ಎಲ್ಲಾ ಹಾರೈಕೆಗಳು ಇಂದು ನಿಜವಾಗಿವೆ.

ಶ್ರೀಮಂಜಯ್ಯ ಹೆಗಡೆಯವರ ಪತ್ನಿ ಶ್ರೀಮತಿ ಲೋಕಮ್ಮನವರು ಆ ಮಹಾ ಪುರುಷನಿಗೆ ತಕ್ಕ ಸತಿ,

ಹಾಲಿಗೆಹಾಲು ಬೆರತಂತೆ ಸುವ್ವಲಾಲಿ
ಈ ದಂಪತಿಗಳ ಮಧುರ ಜೀವನಸುವ್ವಲಾಲಿ
ಬೆಳಕಿಗೆ ಬೆಳಕು ಬೆರತಂತೆ ಸುವ್ವಲಾಲಿ
ಇವರ ಸುಮಧುರದಾಂಪತ್ಯ ಸುವ್ವಲಾಲಿ ॥

ಜನಕಮಹಾರಾಜನಿಗೆ ಸೀತೆ ಒಬ್ಬಳೆ ಮಗಳು, ಸಮುದ್ರರಾಜನಿಗೆ ಶ್ರೀಲಕ್ಷ್ಮಿ ಒಬ್ಬಳೆ ಮಗಳು. ಶ್ರೀ ಮಂಜಯ್ಯ ಹೆಗಡೆ ದಂಪತಿಗಳಿಗೆ ಒಬ್ಬಳೆ ಮಗಳು ಸೌ॥ ವಿಮಲಕುಮಾರಿ,

ಶ್ರೀ ವಿಮಲ ಕುಮಾರಿಯನ್ನು ಶ್ರೀ ಶ್ರೀನಿವಾಸ ಬಲ್ಲಾಳ ಎಂಬ ಯೋಗ್ಯ ವರನಿಗೆ ಕೊಟ್ಟು ವಿವಾಹ ಮಾಡಿದರು, ಒಂದು ಕುಡಿಯಲ್ಲಿ ಹತ್ತು ಹೂವು ಅರಳಿತು ಎಂಬಂತೇ ಆ ಒಬ್ಬ ಮಗಳಲ್ಲಿ ನಾಲ್ವರು ಗಂಡು ಮೊಮ್ಮಕ್ಕಳನ್ನು ನಾಲ್ವರು ಹೆಣ್ಣು ಮಕ್ಕಳನ್ನು ಕಂಡು ಧನ್ಯರಾದರು, ಶ್ರೀಮಂಜಯ್ಯಹೆಗಡೆ ಅವರೋ ಇವರ ಬದುಕು ಎಷ್ಟು ಪುಣ್ಯಪ್ರದವೋ —— ಮರಣವೂ ಅಷ್ಟೇ ಪುಣ್ಯಪ್ರದ,

ಶ್ರೀ ಕ್ಷೇತ್ರದ ಮಹಾಅಧಿಕಾರ, ಗಣ್ಯವ್ಯಕ್ತಿಗಳ ವಿದ್ವಾಂಸರ ಒಡನಾಟ, ಕೀರ್ತಿ, ಸಂಪತ್ತು ಯಾವುದು ಇವರಿಗೆ ಅಂಟಿರಲಿಲ್ಲ ಎಂಬುದಕ್ಕೆ ಇವರ ಮರಣದ ಸಮಯದಲ್ಲಿನ ವರ್ತನೆ ಇವರ ಮಹಾಗುಣಕ್ಕೆ ಸಾಕ್ಷಿ,

ತಾವು ಪಡೆದ ಈ ಎಲ್ಲದ್ದಕ್ಕೆ ಅಂಟಿಕೊಂಡು ಜೇಡರ ಬಲೆಯಲ್ಲಿ ಸಿಲುಕಿದಂತೆ ವ್ಯಾಮೋಹಿತರಾಗಿ — ತೊಳಲಾಡಲಿಲ್ಲ, ತಾವರೆ ಎಲೆಯ ಮೇಲಣ ನೀರಿನಂತೆ ಮರಣಕಾಲದಲ್ಲಿ ಈ ಆಧಿಕಾರ, ಕೀರ್ತಿ, ಸಂಪತ್ತು ಲೌಕಿಕ ಜಂಜಡಾ ಎಲ್ಲಾ ಮರೆತು ಪೂರ್ತಿ ಜಿನನಾಥನ ಧ್ಯಾನದಲ್ಲಿ ಮಗ್ನರಾದರು.

ಮೋಲೆ ತಮ್ಮ ಗೆಳೆಯರೊಬ್ಬರಿಗೆ ಹೇಳಿದಂತೆ "ಈ ಯಾವ ಕೆಲಸಕಾರ್ಯಗಳಲ್ಲಿ ತೊಡಗಿದ್ದರು ಮನಸ್ಸು ಜೀನದೇವನಲ್ಲಿ ಮಗ್ನವಾಗಿರುತ್ತದೆ, ಜನ ಕಲ್ಯಾಣಕ್ಕೆ ಮಾಡುವ ಈ ಎಲ್ಲಾ ಕಾರ್ಯಗಳು ಜಿನವಾಥನ ಸೇವೆ ಎಂದೇ ತಿಳಿದಿದ್ದೇನೆ ಇದು ಹಿಂದಿನ ●ವರ ಮಾತು. ಅವರ ಈ ಮಾತು ನಿಜವೆಂಬಂತೆ ಕಡೆಯದಿನದಲ್ಲಿ ಈ ಯಾವ ವ್ಯಾಮೋಹವೂ ಅವರನ್ನು ಕಾಡಲಿಲ್ಲ.

ಅವರ ಆಪ್ತರಾದ, ಮಹಾ ಜ್ಞಾನಿಗಳಾದ ಜಿನರಾಜ ಶಾಸ್ತ್ರಿಗಳಿಂದ ವ್ರತ ದೀಕ್ಷೆ ಪಡೆದು, ಸಹಸ್ರನಾಮ ಭಕ್ತಾಮರ, ದ್ವಾದಶಾನು ಪೇಕ್ಷೆ, ಪಂಚನಮಸ್ಕಾರ ಮುಂತಾದ ಪುಣ್ಯಪ್ರದ ಸ್ತೋತ್ರ ಕೇಳುತ್ತಾ .... ಶಿಖರ್ಜಿಯಾತ್ರೆ ಮಾಡಿದಂತೆ, ಶ್ರೀಮಂದಿರ ಸ್ವಾಮಿಯ ಪಾದದಲ್ಲಿ ಶರಣು ಬಿದ್ದಂತೆ – ಮನಸ್ಸಿನಿಂದಲೇ ಅನುಸಂಧಾನ ಮಾಡುತ್ತಾ–ಸಲ್ಲೇಖನ ವ್ರತದ ನಿಯಮ ಸ್ವೀಕರಿಸಿ - ಪಂಚನಮಸ್ಕಾರ ಮಂತ್ರ ಕೇಳುತ್ತಾ-ದೇಹತ್ಯಾಗ ಮಾಡಿದರು. ಬೆಳಕು—ಮಹಾಬೆಳಕಿನಲ್ಲಿ ಬೆರೆತು ಅಮರವಾಯಿತು.

– ಸಂಪೂರ್ಣಂ

---

## ಸಿದ್ಧ ಪುರುಷರ ಪುಣ್ಯ ಭೂಮಿ ಸಿದ್ಧಗಂಗಾ ಕ್ಷೇತ್ರ

— ಬಿ. ಪುಟ್ಟಸ್ವಾಮಯ್ಯ.

ನ್ರಿಷೆಯುಳ್ಳ ಭಕ್ತ ನಟ್ಟಡವಿಯಲ್ಲಿರ್ದಡೇನು ಅದು ಪಟ್ಟಣವೆನಿಸುವುದು
ನಿಷ್ಠೆಯಿಲ್ಲದ ಭಕ್ತ ಪಟ್ಟಣದಲ್ಲಿರ್ದಡೇನು ಅದು ನಟ್ಟಡವಿ ಕಣಾ ರಾಮದಾಥ ॥1॥

ಉಳ್ಳವರು ಶಿವಾಲಯವ ಮಾಡುವರು ನಾನೇನ ಮಾಡುವೆ ಕಡುಬಡವನಯ್ಯ
ಎನ್ನ ಕಾಲೇ ಕಂಭ ದೇಹವೇ ದೇಗುಲ ಶಿರವೇ ಹೊನ್ನ ಕಳಸವಯ್ಯ
ಕೂಡಲಸಂಗಮದೇವ ಕೇಳಯ್ಯ ಸ್ಥಾವರಕ್ಕಳಿವುಂಟು. ಜಂಗಮಕ್ಕಳಿವಿಲ್ಲವಯ್ಯ ॥2॥

ಶರಣ ನಿದ್ದೆ ಗೈದೊಡೆ ಜಪ ಕಾಣಿರ ಶರಣನೆದ್ದು ಕುಳಿತೊಡೆ ಶಿವರಾತ್ರಿ ಕಾಣಿರ
ಶರಣ ಮಿಂದುದೇ ತೀರ್ಥ ಶರಣ ನಿಂದುದೇ ಕ್ಷೇತ್ರ ಶರಣ ನಡೆದುದೇ ಸತ್ಪಥ.
ಶರಣ ನುಡಿದುದೇ ಪರತತ್ವ ಕೂಡಲಸಂಗನ ಶರಣರ ಕಾಯವೇ ಕೈಲಾಸ ಕಾಣಿರೆ ॥3॥



# ಕ್ಷೇತ್ರವಾರ್ತೆ

—ಹೆಚ್. ಬಿ. ಗಂಗಾಧರಯ್ಯ

## ಹಳೆಯ ವಿದ್ಯಾರ್ಥಿ ಸಂಘದ ವಿಶೇಷಸಭೆ

ಸೆಪ್ಟಂಬರ್ 1991 ಭಾನುವಾರ ಶ್ರೀ ಮಠದಲ್ಲಿ ಹಳೆಯ ವಿದ್ಯಾರ್ಥಿ ಸಂಘದ ಸರ್ವಸದಸ್ಯರ ವಿಶೇಷ ಸಭೆ ನಡೆಯಿತು. ತ್ರಿವಿಧಿದಾಸೋಹ ಮೂರ್ತಿಗಳಾದ ಪರಮ ಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರ ಪೀಠಾರೋಹಣ ವಜ್ರಮಹೋತ್ಸವ ಸಮಿತಿ ರೂಪಿಸಿರುವ ಯೋಜನೆಗಳನ್ನು ಕಾರ್ಯಾಧ್ಯಕ್ಷರಾದ ಶ್ರೀಬಿ. ಎಸ್. ಮುದ್ದಪ್ಪನವರು (ನಿವೃತ್ತ ಐ.ಎ.ಎಸ್.) ಸಭೆಗೆ ಪರಿಚಯಿಸಿದರು.

| | | |
|---|---|---|
| 1 | 1,500 ವಿದ್ಯಾರ್ಥಿಗಳಿಗೆ ವಸತಿ ನಿಲಯ | 1.57 ಕೋಟಿರೂ |
| 2 | 2,000 ವಿದ್ಯಾರ್ಥಿಗಳಿಗೆ ಪ್ರಸಾದ ನಿಲಯ | 1.25 ಕೋಟಿರೂ |
| 3 | ನೈರ್ಮಲ್ಯ ಮತ್ತು ನೀರು ಸರಬರಾಜು | 0.57 ಲಕ್ಷರೂ |
| 4 | ಶ್ರೀ ಶ್ರೀಗಳವರ ಜನ್ಮಸ್ಥಳವಾದ ವೀರಾಪುರದಲ್ಲಿ- ವೃತ್ತಿ ಶಿಕ್ಷಣ ಕೇಂದ್ರ ಸ್ಥಾಪನೆ | 0.15 ಲಕ್ಷರೂ |

ಒಟ್ಟು 3.54 ಕೋಟಿರೂಗಳು ಯೋಜನೆ ಪೂರ್ಣವಾಗಲು ಬೇಕಾಗುತ್ತದೆ. ನಾವು ಈ ಬಗ್ಗೆ ಕಾರ್ಯನಿರತರಾಗಿದ್ದೇವೆ. ಈ ಮಹತ್ವದ ಕಾರ್ಯಸಾಧನೆಗೆ ಎಲ್ಲರ ಆರ್ಥಿಕ ಸಹಕಾರ ಬಹಳ ಮುಖ್ಯ. ಶಕ್ತಿಮೀರಿ ಎಲ್ಲ ಹಳೆಯ ವಿದ್ಯಾರ್ಥಿಗಳು ಭಕ್ತಿಕಾಣಿಕೆಯನ್ನು ನೀಡಬೇಕಾಗಿ ಕೊರುತ್ತೇವೆ

ವಸತಿನಿಲಯದ ಒಂದು ಕೊಠಡಿಗೆ ತಗಲುವ ವೆಚ್ಚ 35,000 ರೂಗಳು ನೀಡಿದವರ ಹೆಸರನ್ನು ಅಮೃತ ಶಿಲೆಯಲ್ಲಿ ಕೊಠಡಿಯ ಮುಃದೆ ಹಾಕಲಾಗುತ್ತದೆ. 10,000/ ರೂಗಳನ್ನು ನೀಡಿದವರ ಹೆಸರನ್ನು ಇದೇರೀತಿ ಪ್ರಸಾದ ನಿಲಯದ ಮುಂಭಾಗದಲ್ಲಿ ಹಾಕಲಾಗುವುದು ಎಂದು ಪ್ರಕಟಿಸಿದರು.

**ಆದಾಯ ತೆರಿಗೆ ರಿಯಾಯಿತಿ :** ಸರ್ಕಾರ ವಜ್ರಮಹೋತ್ಸವ ನಿಧಿಗೆ ಹಣ ಸಂದಾಯ ಮಾಡಿದವರಿಗೆ ಶೇಖಡ ೫0 ರಷ್ಟು ತೆರಿಗೆ ರಿಯಾಯಿತಿ ನೀಡಿರುವುದಾಗಿ ಸಭೆಯಲ್ಲಿ ಶ್ರೀ ಬಿ. ಎಸ್. ಮುದ್ದಪ್ಪನವರು ಘೊಷಿಸಿದರು.

ಜನಪದ ಸಾಹಿತಿಗಳು ಮತ್ತು ಶ್ರೀ ಮಠದ ಹಿತೈಷಿಗಳಾದ ಶ್ರೀ ಗೊ.ರು. ಚನ್ನಬಸಪ್ಪನವರು ನಿಧಿಗೆ ಹಣ ಸಂಗ್ರಹಿಸುವುದರ ಬಗ್ಗೆ ರೂಪು ರೇಶೆಗಳನ್ನು ವಿವರಿಸಿದರು.

ಶ್ರೀ ಮಠಕ್ಕೆ ಶ್ರೀಶ್ರೀಗಳವರು ಹೃದಯ, ಹಳೆಯ ವಿದ್ಯಾರ್ಥಿ ಸಂಘಕ್ಕೆ ಧರ್ಮಶಾಸನವಿದೆ, ಶ್ರೀ ಮಠ ನಾಡಿನ ಎಲ್ಲ ಜನತೆಯ ಒಳಿತಿಗಾಗಿ ಶ್ರಮಿಸುತ್ತಿದೆ. ಆದರಂತೆ ಎಲ್ಲರು ಶ್ರೀಮಠಕ್ಕೆ ಉದಾರವಾಗಿ ನೀಡುತ್ತಾರೆ, ವಿವಿಧ ಮೊತ್ತದ ಟಿಕೆಟ್ಟುಗಳನ್ನು ಸಿದ್ಧಪಡಿಸಲಾಗಿದೆ. ಅವುಗಳನ್ನು ಮಾರಿ ನಿಧಿಗೆ ಹಣ ಸಂಗ್ರಹಿಸಬೇಕು.

ವಿವಿಧ ಮೊತ್ತದ ಟಿಕೆಟ್ಟುಗಳು ಈ ಕ್ರಮದಲ್ಲಿರುತ್ತವೆ,

| | | | |
|---|---|---|---|
| 25,000 ರೂ, | 10,000 ರೂ. | 5,000 ರೂ. | 1,000 ರೂ. |
| 500 ರೂ, | 1,00 ರೂ | 50 ರೂ. | 25 ರೂ. |
| 10 ರೂ, | 5 ರೂ, | | |

ಶ್ರೀ ಮಠದ ಭಕ್ತಾದಿಗಳು, ಹಿತೈಶಿಗಳು, ಹಳೆಯ ವಿದ್ಯಾರ್ಥಿಗಳು ಮತ್ತು ಶ್ರೀ ಸಿದ್ಧಗಂಗಾ ಸಂಸ್ಥೆಗಳ ಮುಖ್ಯಸ್ಥರು ಟಿಕೆಟ್ಟುಗಳನ್ನು ಪಡೆದು ನಿಧಿ ಸಂಗ್ರಹಣೆಯಲ್ಲಿ ತೊಡಗಬೇಕೆಂದು ಮನವಿ ಮಾಡಿದರು

**ಅರ್ಧ ತಿಂಗಳ ಆದಾಯ :** ಹಳೆಯ ವಿದ್ಯಾರ್ಥಿಗಳು ಸಭೆಯಲ್ಲಿ ಸರ್ವಾನುಮತದಿಂದ ಕನಿಷ್ಟ ಅರ್ಧತಿಂಗಳ ವೇತನ ಆದಾಯವನ್ನು ನಿಧಿಗೆ ನೀಡಬೇಕೆಂದು ಸಂತೋಷದಿಂದ ಒಪ್ಪಿಗೆ ನೀಡಿತು.

— ಸಭೆಯಲ್ಲಿ ನಿಧಿಗೆ ವಾಗ್ದಾನ ಮಾಡಿದ ಮಹನೀಯರುಗಳು —

| | | |
|---|---|---|
| ಶ್ರೀ ಆರ್.ಎಂ.ಬಿ. ಆರಾಧ್ಯರು, ಬೆಂಗಳೂರು | 1 ಬ್ಲಾಕ್‌ಗಾಗಿ | 1,00,000 ರೂ |
| ಡಾ|| ಎಂ.ಸಿ. ಮೋದಿ ಟ್ರಸ್ಟ್ | 1 ಕೊಠಡಿ ನಿರ್ಮಾಣಕ್ಕೆ | 35,000 ರೂ. |
| ಶ್ರೀ ಎಲ್. ರೇವಣ್ಣಸಿದ್ಧಪ್ಪ, (ಐ.ಜಿ ಪಿ.) | ,, | 35,000 ರೂ. |
| ಬೇವೂರು ಮಠದ ಶ್ರೀ ಶ್ರೀಗಳವರು | ,, | 35,000 ರೂ. |
| ಶ್ರೀ ಜಿ. ರಾಜಶೇಖರಯ, ಆಡಿಟರ್, ಬೆಂಗಳೂರು | ,, | 35,000 ರೂ. |
| ಡಾ|| ಎಂ. ಎನ್. ಚನ್ನಬಸಪ್ಪ, ತುಮಕೂರು | ,, | 10,000 ರೂ. |
| ಡಾ|| ಜಿ. ಪರಮೇಶ್ವರಪ್ಪ, ಬೆಂಗಳೂರು | ,, | 6,000 ರೂ. |
| ಶ್ರೀ ಡಿ.ಎಸ್. ರೇಣುಕಾರಾಧ್ಯ, ದಾಸೇನಹಳ್ಳಿ | ,, | 6,000 ರೂ. |
| ಶ್ರೀ ಕೆ.ಎಂ. ರೇವಣ್ಣಸಿದ್ಧಯ್ಯ, ಮೈಸೂರು | ,, | 5,000 ರೂ. |
| ಶ್ರೀ ಕೆ. ಸಿದ್ಧಗಂಗಯ್ಯ, ಬೆಂಗಳೂರು | ,, | 5,000 ರೂ. |
| ಶ್ರೀ ನಂಜುಂಡಪ್ಪ, ಮಲ್ಲಸಂದ್ರ | ,, | 5,000 ರೂ. |



# ಶಿಕ್ಷಕರ ದಿನಾಚರಣೆ

ಸಂಯುಕ್ತ ವಿದ್ಯಾರ್ಥಿ ಸಂಘದ ಆಶ್ರಯದಲ್ಲಿ ಸೆಪ್ಟಂಬರ್ 5ರಂದು ಶ್ರೀ ಮಠದಲ್ಲಿ ಶಿಕ್ಷಕರ ದಿನಾಚರಣೆಯನ್ನು ಆಚರಿಸಲಾಯಿತು. ಪೂಜ್ಯ ಶ್ರೀ ಶ್ರೀ ಗಳವರ ಸಾನ್ನಿಧ್ಯದಲ್ಲಿ ರಾಜ್ಯದ ಸಣ್ಣ ಉಳಿತಾಯ ಖಾತೆಯ ಸಚಿವರಾದ ಶ್ರೀ ಟಿ. ಎಂ. ಮಂಜುನಾಥ್ ಸಮಾರಂಭದ ಅಧ್ಯಕ್ಷತೆ ವಹಿಸಿ ಮಾತನಾಡುತ್ತಾ ಇಂದು ಶಿಕ್ಷಕರನ್ನು ಸನ್ಮಾನಿಸುವ ಪವಿತ್ರದಿನ. ಇಂದು ಭಾರತದ ಸಮಸ್ಯೆಗಳು, ಧರ್ಮದ ಹಿನ್ನೆಲೆ ಮತ್ತು ಪರಂಪರೆಯನ್ನು ಉದಾತ್ತಗೊಳಿಸಲು ಶಕ್ತರಾಗಿರುವುದು ಶಿಕ್ಷಕರು ಮಾತ್ರ. ಈ ದಿಶೆಯಲ್ಲಿ ಡಾ|| ರಾಧಾಕೃಷ್ಣನ್‌ರವರು ಬಹಳವಾಗಿ ಶ್ರಮಿಸಿದರು. ಅವರ ವ್ಯಕ್ತಿತ್ವ ಮತ್ತು ಮಾರ್ಗದರ್ಶನದಲ್ಲಿ ಶಿಕ್ಷಕ ಸಮಾಜ ಮುನ್ನಡೆಯಬೇಕೆಂದು ಮನವಿಮಾಡಿಕೊಂಡರು.

**ಶ್ರೀ ಮಠದ ಶ್ರೇಯಸ್ಸಿಗೆ ಅಹಿತ ಬಯಸುವುದು ಮೂರ್ಖತನ:-** ಇಂದು ಶ್ರೀ ಶ್ರೀ ಗಳವರ ಪಾದ ಸ್ಪರ್ಶಮಾಡಲು ಅವಕಾಶಸಿಕ್ಕಿದ್ದು ನನ್ನ ಪುಣ್ಯ. ಶ್ರೀ ಮಠದ ಸಂಬಂಧ ಇತ್ತೀಚಿನ ವರ್ಷಗಳಲ್ಲಿ ಕಡಿದು ಹೋಗಿತ್ತು. ಶಿಷ್ಯ ಗುರುವನ್ನು ಮರೆಯಬಹುದು. ಆದರೆ ಶ್ರೀಗುರು ಶಿಷ್ಯನನ್ನು ಮರೆಯುವುದಿಲ್ಲ. ನನ್ನ ಆತ್ಮ ಮತ್ತು ಮನಸ್ಸು ಶ್ರೀ ಶ್ರೀಗಳನ್ನು ಸ್ಮರಿಸುತ್ತವೆ. ಶ್ರೀಮಠ ಶ್ರೀಗುರುಗಳ ಕೃಪೆ, ಆಶೀರ್ವಾದ ಮತ್ತು ತಪಸ್ಸಿನ ಪ್ರಭಾವದಿಂದ ಬೆಳೆದಿದೆ. ಇದಕ್ಕೆ ಅಡ್ಡಿಮಾಡಿ ಕುಂದುತರಲು ಪ್ರಯತ್ನಿಸಿದರೆ ಅವರು ಮಹಾ ಮೂರ್ಖರು. ಶ್ರೀ ಮಠದಿಂದ ಜೀವನದಲ್ಲಿ ಬೆಳಕು ಕಂಡಿರುವವರು ಲಕ್ಷೋಪಲಕ್ಷಜನ. ಈಕಾರ್ಯ ಸರ್ಕಾರ ಮಾಡಲು ಸಾಧ್ಯವಿಲ್ಲ. ಇಂಥ ಮಠದಿಂದ ಧರ್ಮ ಸ್ವಲ್ಪ ಮಟ್ಟಿಗೆ ಉಳಿದಿದೆ. ಶ್ರೀ ಶ್ರೀಗಳವರ ಆಶೀರ್ವಾದ ಬಲದಿಂದ ಕರ್ನಾಟಕ ರಾಜ್ಯದಲ್ಲಿ ಮಂತ್ರಿಯಾಗಿದ್ದೇನೆ ಎಂದು ಕೃತಜ್ಞತೆ ವ್ಯಕ್ತಪಡಿಸಿದರು.

ಮುಖ್ಯ ಅತಿಥಿಯಾಗಿ ತುಮಕೂರು ಸುಪ್ರಸಿದ್ಧ ಕೈಗಾರಿಕೋದ್ಯಮಿಗಳಾದ ಶ್ರೀ ಎನ್. ಆರ್. ಜಗದೀಶ್‌ರವರು ಮಾತನಾಡುತ್ತಾ ಉತ್ತಮ ಆದರ್ಶಗಳನ್ನು ಮೈಗೂಡಿಸಿಕೊಂಡು ಶಿಕ್ಷಕರು ಕಾರ್ಯೋನ್ಮುಖರಾದರೆ ರಾಷ್ಟ್ರಪ್ರಗತಿಯಾದೀತು ಎಂದು ಎಚ್ಚರಿಸಿದರು.

ಶ್ರೀ ಶ್ರೀ ಗಳವರು ಆಶೀರ್ವಚನ ನೀಡುತ್ತಾ ಸಮಾಜ-ರಾಷ್ಟ್ರದಲ್ಲಿ ಶಿಕ್ಷಕರ ಸ್ಥಾನ ಬಹಳ ಹಿರಿದು. ಡಾ|| ರಾಧಾಕೃಷ್ಣನ್‌ರವರು ಮೇಧಾವಿಗಳು, ತತ್ವಜ್ಞಾನಿಗಳು,ರಾಷ್ಟ್ರ ಪ್ರೇಮ ಉಳ್ಳವರು, ಜಗತ್ತಿನ ಎಲ್ಲ ರಾಷ್ಟ್ರಗಳಲ್ಲಿ ಸಂಚರಿಸಿ ಭಾರತದ ಹಿರಿಮೆಯನ್ನು ಪ್ರಚಾರ ಮಾಡಿದ್ದಾರೆ. ಶಿಕ್ಷಕ ನಾಡಿನ ಜನಾಂಗ ಉದ್ಧರಿಸುವವನು. ಇಂದು ಸಾಮಾಜಿಕ ಜೀವನ ಕೆಳಮಟ್ಟಕ್ಕೆ ಹೋಗಿದೆ. ಕಾರಣ ತತ್ವಜ್ಞಾನದ ಅಭಾವ. ಪ್ರಯುಕ್ತ ಶಿಕ್ಷಕರು ಆದರ್ಶಸ್ಥಾನವನ್ನು ದೊರಕಿಸಿಕೊಳ್ಳಲು ಸದಾ ಪ್ರಯತ್ನಿಸುತ್ತಿರಬೇಕೆಂದು ಹೇಳಿದರು.

## ಅಭಿನಂದನೆ

ಪೊಲೀಸ್ ಇಲಾಖೆಯ ವರಿಷ್ಠಾಧಿಕಾರಿಗಳಲೊಬ್ಬರಾದ ಮಾನ್ಯ ಶ್ರೀ ಎಸ್. ಎಂ. ಶಂಕರಬಿದರಿಯವರು ಇತ್ತೀಚೆಗೆ ರಾಷ್ಟ್ರಪತಿಯವರಿಂದ ಶೌರ್ಯಪ್ರದರ್ಶನ ಪ್ರಶಸ್ತಿ ಪುರಸ್ಕೃತರಾದುದನ್ನು ತಿಳಿದು "ಸಿದ್ಧಗಂಗಾ" ಸಂತೋಷಿಸುತ್ತದೆ. ಬಳ್ಳಾರಿಯಲ್ಲಿ ಜಿಲ್ಲಾಪೊಲೀಸ್ ಮುಖ್ಯಾಧಿಕಾರಿಗಳಾಗಿದ್ದ ಶ್ರೀಯುತರು ಕುಖ್ಯಾತನಾಗಿದ್ದ ಭೀಮಣ್ಣನಾಯಕನ ಬಂಧನದ ಪ್ರಕರಣದಲ್ಲಿ ಜೀವದ ಹಂಗು ತೊರೆದು ಹೋರಾಡಿದುದನ್ನು ಪರಿಗಣಿಸಿ ರಾಷ್ಟ್ರಪತಿ ಶೌರ್ಯಪ್ರಸಸ್ತಿ ನೀಡಿರುವುದು ಸೂಕ್ತವಾಗಿದೆ. ತುಮಕೂರು ಜಿಲ್ಲೆಯಲ್ಲಿ ಪೊಲೀಸ್ ಮುಖ್ಯಾಧಿಕಾರಿಗಳಾಗಿ ಶ್ರೀಯುತರು ಸಲ್ಲಿಸಿದ ಪ್ರಾಮಾಣಿಕ, ದಕ್ಷಸೇವೆಯನ್ನು 'ಸಿದ್ಧಗಂಗಾ' ಈ ಸಂದರ್ಭದಲ್ಲಿ ಹೃತ್ಪೂರ್ವಕವಾಗಿ ಸ್ಮರಿಸುತ್ತದೆ. ಶ್ರೀ ಎಸ್. ಎಂ. ಶಂಕರಬಿದರಿಯವರ ಸೇವಾವಧಿ ಸಮಾಜ, ಸರ್ಕಾರಗಳು ಮೇಲಿಂದ ಮೇಲೆ ಅಭಿನಂದಿಸುವಂತೆ ಆನಂದದಾಯಕವಾದುದಾಗಿರಲಿ ಎಂದು ಹಾರೈಸುತ್ತಾ, ಶ್ರೀಯುತರಿಗೆ ಸಕಲ ಸನ್ಮಂಗಳವನ್ನುಂಟು ಮಾಡುವಂತೆ ಬಸವಾದಿಶರಣರನ್ನು ಶ್ರೀ ಸಿದ್ಧಗಂಗಾ ಗುರುಪರಂಪರೆಯನ್ನೂ "ಸಿದ್ಧಗಂಗಾ" ಪ್ರಾರ್ಥಿಸುತ್ತದೆ.



## ಶ್ರದ್ಧಾಂಜಲಿ

ಶ್ರೀ ಮದ್‌ರಂಭಾಪುರಿವೀರ ಸಿಂಹಾಸನಾಧೀಶ್ವರ ಶ್ರೀ ಶ್ರೀ ಶ್ರೀ 1008 ಜಗದ್ಗುರು ಪ್ರಸನ್ನರೇಣುಕ ವೀರರುದ್ರಮುನಿದೇವ ಶಿವಾಚಾರ್ಯ ಭಗವತ್ಪಾದ ಮಹಾಸನ್ನಿಧಿಯವರು ಇತ್ತೀಚೆಗೆ ಲಿಂಗೈಕ್ಯರಾದುದನ್ನು ತಿಳಿದು 'ಸಿದ್ಧಗಂಗಾ' ಅತೀವ ಶೋಕಕ್ಕೊಳಗಾಗಿದೆ. ಸಂಸ್ಕೃತ, ಕನ್ನಡ ಭಾಷೆಗಳಲ್ಲಿ ತುಂಬು ವಿದ್ವಾಂಸರಾಗಿದ್ದ ಜಗದ್ಗುರುಗಳು ಶ್ರೀ ಪೀಠದ ಪರಂಪರೆಯ ಅಭಿವೃದ್ಧಿಗಾಗಿ ಅಪಾರ ಶ್ರಮಿಸುತ್ತಿದ್ದರು. ವೀರಶೈವ ಧರ್ಮಾಭಿವೃದ್ಧಿಗಾಗಿ ಉದಾರ ದೃಷ್ಟಿಯ ಸಮನ್ವಯ ಮನೋಧರ್ಮವನ್ನು ಹೊಂದಿದ್ದ ಪೂಜ್ಯಪಾದರ ಅಗಲಿಕೆ ಆಸ್ತಿಕ ಲೋಕಕ್ಕೆ ಬಹು ದೊಡ್ಡನಷ್ಟವಾಗಿದೆ. ಲಿಂಗೈಕ್ಯರಾದ ಜಗದ್ಗುರುಗಳ ದಿವ್ಯಾತ್ಮಕ್ಕೆ ಭಕ್ತಿಪೂರ್ವಕ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ "ಸಿದ್ಧಗಂಗಾ".



ಸಂಗೀತ ಸಾಮ್ರಾಟ, ಗಾನಗಂಧರ್ವ ಶ್ರೀ ಬಸವರಾಜಗುರು ಇತ್ತೀಚೆಗೆ ಲಿಂಗೈಕ್ಯರಾದುದನ್ನು ತಿಳಿದು 'ಸಿದ್ಧಗಂಗಾ' ದುಃಖಿಸುತ್ತದೆ. ಕರ್ನಾಟಕದ ಅಮೂಲ್ಯ ನಿಧಿಯಾಗಿದ್ದ, ಸಂಗೀತ ಜಗತ್ತಿನ ಧ್ರುವತಾರೆಯೆನಿಸಿ ಸಂಗೀತ ದಿಗ್ಗಜಗಳ ನಡುವೆ ಭಕ್ತಿ ದೀಪವಾಗಿ ಬೆಳಗಿದ ಶ್ರೀ ಬಸವರಾಜಗುರುಗಳ ಅಗಲಿಕೆಯಿಂದ ಕರ್ನಾಟಕ ನಿಜಕ್ಕೂ ಬಡವಾಗಿದೆ. ಕಲಾವಿದನ ಕಣ್ಮರೆಯಿಂದ ಸಾಂಸ್ಕೃತಿಕ ಲೋಕ ಕೃಶವಾಗಿದೆ ಸುಸಂಸ್ಕೃತ ಪರಂಪರೆಯನ್ನು ಜೀವನದಲ್ಲಿ ಅನುಷ್ಠಾನಕ್ಕೆ ತಂದಿದ್ದ ಶ್ರೀಯುತರಿಗೆ ಅಭಿಮಾನಿಗಳು, ಸಮಾಜ ಬಂಧುಗಳು, ಅಶ್ರುತರ್ಪಣ ಅರ್ಪಿಸಿ ದುಃಖಭರಿತರಾಗಿದ್ದಾರೆ. ಶ್ರೀಯುತರ ಅಗಲಿಕೆಯಿಂದಾದ ನೋವನ್ನು ಭರಿಸುವ ಶಕ್ತಿಯನ್ನು ಅವರ ಕುಟುಂಬ ವರ್ಗದವರಿಗೆ ಬಸವಾದಿ ಶರಣರು ಶ್ರೀ ಸಿದ್ಧಗಂಗಾ ಗುರುಪರಂಪರೆ ನೀಡಲಿ ಎಂದು "ಸಿದ್ಧಗಂಗಾ" ಪ್ರಾರ್ಥಿಸುತ್ತ, ಶ್ರೀ ಬಸವರಾಜಗುರುಗಳ ಆತ್ಮಕ್ಕೆ ವಿನಮ್ರ ಗೌರವವನ್ನು ಸಲ್ಲಿಸುತ್ತದೆ.

## ಸಂತಾಪ

ದಿನಾಂಕ 29-9-91 ರಂದು ಧಾರವಾಡದಲ್ಲಿ ಹಿರಿಯ ಸಂಶೋಧಕ ಡಾ॥ ಶಂ.ಬಾ. ಜೋಶಿಯವರು ನಿಧನರಾದುದನ್ನು ತಿಳಿದು 'ಸಿದ್ಧಗಂಗಾ' ಶೋಕಿಸುತ್ತದೆ. ನಾಡಿನ ಸಂಶೋಧಕ ಲೋಕಕ್ಕೆ ಶ್ರೀ ಜೋಶಿಯವರ ಅಗಲಿಕೆಯಿಂದ ತುಂಬಲಾರದ ನಷ್ಟವಾಗಿದೆ. ಅವರ ಸಂಶೋಧಕ ಕೃತಿಗಳು ಕನ್ನಡ ಸಾಹಿತ್ಯವನ್ನು ಶ್ರೀಮಂತ ಗೊಳಿಸಿವೆ. ಮಡಿಕೇರಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದ ಶ್ರೀಯುತರು ಅನೇಕ ಗೌರವ ಪ್ರಶಸ್ತಿಗಳಿಗೆ ಪುರಸ್ಕೃತರಾಗಿದ್ದರು. ಕಣ್ಮರೆಯಾದ ಶ್ರೀಯುತರ ಕುಟುಂಬವರ್ಗದವರಿಗೆ ಅಗಲಿಕೆಯನೋವನ್ನ ಸಹಿಸುವ ಶಕ್ತಿಯನ್ನು ಕೊಡಲೆಂದು ದಯಾಮಯನಾದ ಭಗವಂತನನ್ನು ಪ್ರಾರ್ಥಿಸುತ್ತ, ಡಾ॥ ಶಂ. ಬಾ. ಜೋಶಿಯವರ ಆತ್ಮಕ್ಕೆ ನಮ್ರಗೌರವವನ್ನು ಸಲ್ಲಿಸುತ್ತದೆ "ಸಿದ್ಧಗಂಗಾ'.



ದಿನಾಂಕ-28-9-91ರಂದು ಬೆಂಗಳೂರಿನಲ್ಲಿ ಶ್ರೀ ಗೊರೂರು ರಾಮಸ್ವಾಮಿ ಐಯ್ಯಂಗಾರ್ ಅವರು ನಿಧನರಾದುದನ್ನು ತಿಳಿದು 'ಸಿದ್ಧಗಂಗಾ' ದುಃಖಿಸುತ್ತದೆ. ಶ್ರೇಷ್ಠ ಸಾಹಿತಿಗಳಾಗಿದ್ದ ಶ್ರೀಯುತರು ಜಾನಪದ ವಿದ್ವಾಂಸರೂ ಆಗಿದ್ದರು. ಗ್ರಾಮೀಣ ಜೀವನದ ಬಗ್ಗೆ ಗೌರವಾದರಗಳಿಂದ ಅನೇಕ ಗ್ರಂಥಗಳನ್ನು ಬರೆದಿದ್ದರು. ಅವರ ಬರೆಹಗಳಲ್ಲಿ ಶುದ್ಧ ಅಭಿರುಚಿಯ ಹಾಸ್ಯ ವ್ಯಕ್ತವಾಗಿರುವುದನ್ನು ಇಲ್ಲಿ ಸ್ಮರಿಸಬೇಕು. ಗಾಂಧಿ ಮಾರ್ಗಾನುಯಾಯಿಗಳಾಗಿದ್ದ ಶ್ರೀಯುತರ ಅಗಲಿಕೆ ಕನ್ನಡ ಸಾರಸ್ವತ ಲೋಕಕ್ಕಾದ ನಷ್ಟ. ಕಣ್ಮರೆಯಾದ ಶ್ರೀಯುತರು ಕುಟುಂಬ ವರ್ಗದವರಿಗೆ ಅವರ ಅಗಲಿಕೆಯ ನೋವನ್ನು ಭರಿಸುವ ಶಕ್ತಿಯನ್ನು ದಯಾಮಯನು ನೀಡಲೆಂದು ಪ್ರಾರ್ಥಿಸುತ್ತ, ಅಗಲಿದ ಶ್ರೀ ಗೊರೂರು ರಾಮಸ್ವಾಮಿಐಯ್ಯಂಗಾರರ ಆತ್ಮಕ್ಕೆ 'ಸಿದ್ಧಗಂಗಾ' ಗೌರವವನ್ನು ಸಲ್ಲಿಸುತ್ತದೆ.

ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಪುರಸ್ಕೃತರಾಗಿದ್ದ ಶ್ರೀ ಗೊರೂರರು ಅನೇಕ ಗೌರವಗಳ ಜೊತೆಗೆ ಡಿ.ಲಿಟ್. ಗೌರವ ಪದವಿಯನ್ನು ಪಡೆದಿದ್ದರು. ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು.

"SIDDAGANGA" MONTHLY Reg. No. KRNQ-9



ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾಮಠ.